# ಮೊದಲ ಕಲ್ಲು

# ಶ್ರೀಶೇಷದಾಸವರ್ಯರ ಚರಿತ್ರೆ

## (ಗತಜನ್ಮಗಳ ಸಾಮ್ರಾಜ್ಯ ವೈಭವ)




ಲೇಖಕರು :

ಶ್ರೀದಾಸವರ್ಯರ ದಾಸಾನುದಾಸ

**ಪಿ. ರಾಮಚಂದ್ರರಾವು**



ಪ್ರಕಾಶಕರು :

**ಜ್ಞಾನ ಪ್ರಸಾರ ಪ್ರಕಾಶನ**

ಶ್ರೀ ಗುರುವಿಜಯದಾಸಾಶ್ರಮ,

6-2-68/24/1, ಅಮರಖೇಡ ಲೇಔಟ್,

ಮಾಣಿಕ್ಯ ಪ್ರಭು ಗುಡಿ ಬೀದಿ, ರಾಯಚೂರು - 584 101.

# ಮೊದಲ ಕಲ್ಲು
# ಶ್ರೀಶೇಷದಾಸವರ್ಯರ ಚರಿತ್ರೆ

(ಗತಜನ್ಮಗಳ ಸಾಮ್ರಾಜ್ಯ ವೈಭವ)

ವೃಷ್ಣೀನಾಂ ವಾಸುದೇವೋಸ್ಮಿ ಪಾಂಡವಾನಾಂ ಧನಂಜಯಃ ।
ಮುನೀನಾಮಪ್ಯಹಂ ವ್ಯಾಸಃ ಕವೀನಾಮುಶನಾ ಕವಿಃ ॥

ಶ್ರೀ ಗೀತಾ ೧೦ನೇ ಅಧ್ಯಾಯ ಶ್ಲೋಕ 37



ಲೇಖಕರು :
ಶ್ರೀದಾಸವರ್ಯರ ದಾಸಾನುದಾಸ
ಪಿ. ರಾಮಚಂದ್ರರಾವು
ರಾಯಚೂರು

"Modalakallu Sheshadasaru - History of Sheshadasaru Written by P. Ramachandra Rao, Published by Gnana Prasara Prakashana, Sri GuruVijayadasashrama, 6-2-68/24/1, Amarkhed Layout, Manickkaprabhu Temple Road, Raichur - 584 101.



ಮೊದಲ ಮುದ್ರಣ : 1999

ಬೆಲೆ :

ಡಿ. ಟಿ. ಪಿ. ಮತ್ತು ಮುದ್ರಣ :
ಭಾರತೀಶ ಎಂಟರ್‌ಪ್ರೈಸಸ್
ಬೆಂಗಳೂರು : 560 078 ದೂರವಾಣಿ : 666 2254

ಪ್ರಕಾಶಕರು :
ಜ್ಞಾನ ಪ್ರಸಾರ ಪ್ರಕಾಶನ
ಶ್ರೀ ಗುರು ವಿಜಯದಾಸಾಶ್ರಮ,
6-2-68/24/1, ಅಮರಖೇಡ ಲೇಔಟ್,
ಮಾಣಿಕ್ಯ ಪ್ರಭು ಗುಡಿ ಬೀದಿ,
ರಾಯಚೂರು - 584 101.

# ಪರಿವಿಡಿ

# ಆಶೀರ್ವಚನ

ಶ್ರೀ ಶೇಷದಾಸರ ಗತ ಜೀವನದ ವೈಭವವನ್ನು ವಿಶದೀಕರಿಸಿದ ಈ ಗ್ರಂಥವು ಬಹು ಉಪಯುಕ್ತವೆನಿಸಿದೆ. ಇಂದ್ರಾಂಶರಾಗಿ ಜನುಮವೆತ್ತಿದ ಅರ್ಜುನ, ಜಯತೀರ್ಥರು, ಶೇಷದಾಸರ ಬಗ್ಗೆ ಪರಿಶ್ರಮವಹಿಸಿ, ವಿಷಯ ಸಂಗ್ರಹಿಸಿ, ಭಕ್ತರಿಗೆ, ಅಭ್ಯಾಸಗಳಿಗೆ ಅನುಕೂಲವಾಗುವಂತೆ, ದಾಸರು ಸ್ವತಃ ರಚಿಸಿದ ಪದ, ಪದ್ಯ, ಸುಳಾದಿಗಳ ಆಧಾರದಿಂದ, ಗ್ರಂಥರೂಪದಲ್ಲಿ ಶ್ರೀ ಪಿ. ರಾಮಚಂದ್ರರಾವ್ ನಿವೃತ್ತ ಅಧ್ಯಾಪಕರು ಒದಗಿಸಿ ಕೊಟ್ಟಿದ್ದಾರೆ. ಅವರ ಪರಿಶ್ರಮವು ಸಾರ್ಥಕವಾಗಲೆಂದು ಪ್ರಾರ್ಥನೆ.

ಇವರಿಂದ ಇನ್ನೂ ಅನೇಕ ಕೃತಿಗಳು ಹೊರ ಬರಲೆಂದು ಶ್ರೀಶೇಷದಾಸವರ್ಯ ಅಂತರ್ಗತ, ಭಾರತಿರಮಣ ಮುಖ್ಯ ಪ್ರಾಣ ಅಂತರ್ಗತ ಶ್ರೀಪಾರ್ಥಸಾರಥಿಯು ಅನುಗ್ರಹಿಸಲೆಂದು ಹಾರೈಸುತ್ತೇನೆ.

ಭಕ್ತರು ಈ ಪುಸ್ತಕವನ್ನು ಓದಿ ಕೊಂಡು, ಶ್ರೀಹರಿ ವಾಯು ಗುರುಗಳ ಅನುಗ್ರಹಕ್ಕೆ ಪಾತ್ರರಾಗುವರೆಂಧು ವಿಶ್ವಾಸಿಸುತ್ತೇನೆ.

## ಉಗಾಭೋಗ

ದೈತ್ಯನ್ನ ವಧೆಗಾಗಿ ಶಪಥ ಮಾಡಲಾಗಿ| ಕೃತ್ತಿವಾಸನ ದ್ವಾರ ಕೃಪೆಯು ಮಾಡಿ| ಸುತ್ತ ಕಾದಿದ್ದ ಆಪ್ತ ಮಿತ್ರರು ರಕ್ಷಿಸುತ್ತಿರೆ| ಕತ್ತಲೆ ಗೈಸಿ ಶಿರ ಕಿತ್ತಿ ಚಂಡಾಡಿಸಿ | ಭಕ್ತನ ಪ್ರತಿಜ್ಞೆಕ್ಕೆ, ಗೆಲಿಸಿ ದಂಥೆ| ಸತ್ಯವಾದ ರೂಢಿಸಿ ಜಗವು ಬಲ್ಲದು | ಎಂದು ಪ್ರಾರ್ಥಿಸಿದನು ಎನ್ನ ಕಡೆ ಮೋಗವೆತ್ತಿ ನೋಡದೆ ಅನ್ಯನಂತೆ ಎತ್ತೆಂಬ ದೃಡದಿಂದ ಈಗ ಇದನು ಚಿಂತ್ಯಸಬೇಕು| ಪೃಥ್ವಿ ಪಾಲಕನಾದ ಸಾರ್ವಭೌಮಂಗೆ ಪರಮ| ರಿಕ್ತ ಅನುಬಂಧ ಪೇಳಿ ಓಗ್ಗುವಂತೆ| ಉತ್ತಮೋತ್ತಮ ನಿನ್ನ ಇನಿತು ತಿಳಿದು | ಭಕ್ತಿ ಇಲ್ಲದಲೆ ಸಥೆ ಇಂದ ನುಡಿದಂಥ | ಉಕ್ತಿಗೆ ವ್ಯಾಹತಿ ತಂದದಕೆ ನಿನ್ನ | ಮಿತ್ರತ್ವ ಏನುಂಟು ಇದರೊಳಗೆ | ಭೃತ್ಯರ ಅಭಿಮಾನ ಕಾಯದಿದ್ದರೆ ಒಡೆಯ ಕೀರ್ತಿಯೈದುವ ನೇನೂ ಮಾನ್ಯನಾಗಿ | ಸತ್ಯ ಸಂಕಲ್ಪ ಗುರು ವಿಜಯ ವಿಠ್ಠಲರೇಯ | ಈ ತೆರದಲಿ ಮಾಡದಿರು ಎಂದಿಗನ್ನ || ೧ ||

ತುಪ್ಪತರಾಳ್ಳ ಪಿ. ರಾಮಚಂದ್ರ ರಾಯರು ಬಹುಮುಖ ಪ್ರಜ್ಞಾಶಾಲಿಗಳು, ಇವರಿಗೆ ದೇವರು ಆಯುರಾರೋಗ್ಯ ಭಾಗ್ಯ ಪಾಲಿಸಲೆಂದು ಪ್ರಾರ್ಥನೆ.

ಗುರು ಮಧ್ವರಾವ್ ಉಪ್ಪಲಿ
ಶ್ರೀ ಗುರುವಿಜಯದಾಸಾಶ್ರಮ
ರಾಯಚೂರು.

# ಮುನ್ನುಡಿ

ಜತೆ : ಪ್ರಾರಬ್ಧ ಕರ್ಮವನ್ನು ಮೀರುವವರಿಲ್ಲ ಜಗದಿ |
ನೀರಜಾಕ್ಷನೆ ಗುರುವಿಜಯ ವಿಠ್ಠಲರೆಯಾ ||

ಬಾಳಿನಲ್ಲಿ ಬಹುವಾದ ತೊಂದರೆಗಳಿಂದ ಬೆಂದು ಬಳಲಿ ಬೆಂಡಾದಾಗ ಭಕ್ತನು ಕರುಣಾಸಾಗರನಾದ ಪರಮಾತ್ಮನಲ್ಲಿ ಮೊರೆಯಿಡುತ್ತಾನೆ. ಇಂದ್ರಾಂಶರಾದ ಶ್ರೀಶೇಷದಾಸರು ದರೂರು ಧರಣಿಯ ಮೇಲೆ ಜನುಮವೆತ್ತಿದಾಗ ತಾಪತ್ರಯದಿ ತಪ್ತರಾದಾಗ, ತಮ್ಮ ಗತಜನುಮಗಳ ವೈಭವವನ್ನು ನೆನಿಸಿಕೊಂಡು ಈ ಮೇದಿನಯ ಮೇಲೆಯಾದ ವೇದನೆಯನ್ನು ಹೀಗೆ ಹೇಳಿದ್ದಾರೆ.

**ತ್ರಿವಿಡಿ ತಾಳ**

ಅನುಭವ ಪೇಳುವೆನು ಆದರದಲಿ ಕೇಳು |
ಘನವಾದ ಪ್ರಾರಬ್ಧ ಮನಿಯ ಮಾಡಿ ಸು |
ಮನಸರ ಶಾಪವೆಂಬೊ ಸೂಚಕದಿಂದಲಿ |
ಘನವಾದ ಸ್ಥಾನದಿಂದ ಕಡೆಗೆ ಮಾಡಿ |
ಮನುಜ ಲೋಕದಲ್ಲಿ ಪುಟ್ಟಿಸಿ ಘೋರವಾದ
ಬಿನಗು ಸಂಸಾರವೆಂಬ ಪಾಶದಲ್ಲಿ |
ತನುವು ಬಂಧಿಸಿ ಸತತ ಕಾಮಕ್ರೋಧವೆಂಬೋಗ |
ಹನ ಮಡುವಿನೊಳಗೆ ನೂಕಿದಯ್ಯಾ |
ಜ್ಞಾನ| ಚ್ಛಾದನ ಮಾಡಿ ಪರಿ ಪರಿ ದುಃಖದಿಂದ |
ಅನುದಿನ ಬಳಲಿಸಿದಿ ಅನ್ಯಾಯದಿ |
ಅಣು ಮಹಾ ವ್ಯಾಪ್ತ ಗುರು ವಿಜಯ ವಿಠ್ಠಲ ನಿನ್ನ |
ಅನುಗ್ರಹ ತಪ್ಪುವುದೆ ಅಪದವೋ ||

ಹೀಗೆ ಭಗವದ್ರೂಪವಾದ ಪ್ರಾರಬ್ಧ ಕರ್ಮವನ್ನು ಸವೆಸಲು ಮತ್ತು ಪುಣ್ಯ ಸಾಧನೆ ಮಾಡಿ ಕೊಳ್ಳಲು ನರ ಜನ್ಮವೆತ್ತಿ ಬಂದಾಗ ಶೇಷದಾಸರು ಭಗವಂತನಿಗೆ ಮೊರೆ ಹೊಕ್ಕು ಕೇಳಿ ಕೊಂಡದ್ದು:

**ಉಗಾಭೋಗ :**

ಇನ್ನೆಷ್ಟು ಕಾಲಕ್ಕೆ ಮರಿಯಾದಂತೆ ಮಾಡಿಸಿದಿ |
ಉನ್ನತ ಮಹಿಮಾ ನಿನ್ನ ಇಚ್ಛೆಗೆ ಇದಿರ್ಯಾರೊ |
ಇನ್ನಾದರೂ ನೀ ಕೃಪೆಯಿಂದ ನೋಡದಿರೆ |
ಘನ್ನವಾದ ದುಃಖದಿಂದ ಕಡಿಗೆ ಐದುವಿನೆಂತೊ |
ಚಿನ್ಮಯ ಮಾರುತಿ ಗುರುವಿಜಯ ವಿಠ್ಠಲರೇಯಾ |
ಎನ್ನ ಅಪರಾಧವು ನಿನಗರ್ಪಿತವು ||

ಶ್ರೀಹರಿ ದಾಸವರೇಣ್ಯರಲ್ಲಿ ತಮ್ಮ ಸ್ವರೂಪವನ್ನು ಸ್ಪಷ್ಟವಾಗಿ ಹೇಳಿಕೊಂಡುವರಲ್ಲಿ ಶ್ರೀ ಶೇಷದಾಸರೊಬ್ಬರೇ ಎಂದು ಹೇಳಬಹುದು ತಾವು ಅರ್ಜುನರಾಗಿ, ಜಯತೀರ್ಥರಾಗಿ ಮಾಡಿದ ಮಹತ್ಕಾರ್ಯಗಳನ್ನು ನೆನಿಸಿಕೊಂಡು ಸುಳಾದಿಯಲ್ಲಿ ನಿರೂಪಿಸಿ, ತಮ್ಮ ಅಂಶವನ್ನು ನಿರ್ಭಯವಾಗಿ ಪ್ರಕಟಪಡಿಸಿದ್ದಾರೆ.

ಶ್ರೀಶೇಷದಾಸರು ಮತ್ತೊಂದು ಸುಳಾದಿಯಲ್ಲಿ
" ಬಲವುಳ್ಳ ವಸ್ತು ಮಧ್ಯ ನಿನಗಿಂದಧಿಕವಾದ |
ಬಲವುಳ್ಳ ವಸ್ತು ಆವುದಯ್ಯ ಪೇಳೊ |

..................................

ಎಮ್ಮ ನಿಮಿತ್ಯವಾಗಿ ಸ್ವರೂಪ ಚಿನ್ಹೆಯ ಬಿಟ್ಟು |
ಆ ಮಹಾಕೈಯಲ್ಲಿ " ಕಶವನ್ನು" ಧರಿಸಿದಿ |
ಎಮ್ಮ ಪಾಲಿನ ದೈವ ಗುರುವಿಜಯ ವಿಠ್ಠಲರೇಯಾ |
ಸಮ್ಮುಖನಾಗುವುದು ಕ್ಷಣವಗಲದೆ ಎನ್ನ ||

ಜತೆ : ದುರಳನ್ನ ಪಕ್ಷ ಬಿಟ್ಟು ಎನ್ನ ಪಾಲಿಗೆ ಬಂದ |
ಪರಿಯ ಮರೆಯದಿರೋ ಗುರುವಿಜಯ ವಿಠ್ಠಲ ||

ಹೀಗೆ ದುರ್ಯೋಧನನ ಪಕ್ಷ ಬಿಟ್ಟು, ಅರ್ಜುನನ ಪಾಲಿಗೆ, ಸಲುಗಿಗೆ ಅಂತಃಕರಣಕ್ಕೆ ಬಂದ ಶ್ರೀಕೃಷ್ಣನನ್ನು ನೆನಿಸಿಕೊಂಡಿದ್ದಾರೆ. ಇನ್ನೊಂದು, ಸುಳಾದಿಯಲ್ಲಿ.

ತಾವು ಜಯತೀರ್ಥರಾಗಿದ್ದುದನ್ನು ಸ್ಮರಿಸಿದ್ದದು :

ಪ್ರಕಟ ಸಂಪದದಿಂದ ಸಿದ್ಧನಾದವನಾಗಿ |
ರಿಕುತನೆಂದೆನಿಸಿದಿ ಅಧಿಕ ಅಧಿಕವಾಗಿ |
ಪ್ರಖ್ಯಾತನಾಗಿ ಮಾನ್ಯನೆನಿಸಿ ಕುಂಭಿಣಿಯಲ್ಲಿ ಕು |
ಹಕ ಜನರ ಮಧ್ಯನಿಂದೆ ವೈದಿದೆ ಬಲು |
ಉಕುತಿಯಿಂದಲಿ ದುಷ್ಟ ಮತಗಳ ಭೇದಿಸಿ
ಲಕುಮಿ ಪತಿಯೆ ಪರನೆಂದು ಬೀರಿದ ಜಿಹ್ವೆ |
ಶಕುತಿಯಿಂದಲಿ ಒಮ್ಮೆ ಹರಿಯ ಉಚ್ಚರಿಸದು |
ಲಿಖಿನಸಾಂಡಾಧಿಪ ಗುರು ವಿಜಯ ವಿಠ್ಠಲಂಗೆ |
ಭಕುತನೆನಿಸಿ ಈಗ ಬಲು ದೂರನಾದೆ ||

ಭವ್ಯ ಪರಂಪರೆಯುಳ್ಳ ಶ್ರೀಶೇಷದಾಸರ ಜೀವನ ಹಾಗು ಅವರ ಗತ ಜನುಮಗಳ ಚರಿತ್ರೆ ವೈಶಿಷ್ಟ್ಯ ಪೂರ್ಣವಿದೆ. ಈ ವಿಷಯವನ್ನೆ ಚಿಂತನೆ ಮಾಡಿ, ನನ್ನ ಮಿತ್ರರಾದ ಶ್ರೀ ಪಿ. ರಾಮಚಂದ್ರರಾವ್ ನಿವೃತ್ತ ಶಿಕ್ಷಕರು ರಾಯಚೂರು, ಗ್ರಂಥದಲ್ಲಿ ನಿರೂಪಿಸಿದ್ದಾರೆ.

" **ಮೊದಲ ಕಲ್ಲು ಶ್ರೀ ಶೇಷದಾಸ ವರ್ಯರ ಚರಿತ್ರೆ - ಗತ ಜನ್ಮಗಳ ವೈಭವ** " ಎಂಬ ಈ ಪುಸ್ತಕದಲ್ಲಿ ನಾಲ್ಕು ಭಾಗಗಳಿವೆ.

1. ಒಂದನೆ ಭಾಗ : ಪಾಂಡವ ಮಧ್ಯಮನಾದ - ಶ್ರೀ ಅರ್ಜುನ
2. ಎರಡನೆ ಭಾಗ : ವೃಷಭ ಜನುಮ ತಾಳಿ ಬಂದ - ಎತ್ತಿನ ಕಥೆ
3. ಮೂರನೆ ಭಾಗ : ಶ್ರೀದೊಂಡೊ ಪಂತರು - ಶ್ರೀಜಯತೀರ್ಥಯತಿಗಳು
4. ನಾಲ್ಕನೆ ಭಾಗ : ಆದಿಶಿಲಾಕ್ಷೇತ್ರ - ಮೊದಲಕಲ್ಲು ಶ್ರೀಶೇಷದಾಸರು.

ಪ್ರತಿಯೊಂದು ಭಾಗದಲ್ಲಿ ಸಂಬಂಧ ಪಟ್ಟ ಚರಿತ್ರನಾಯಕರ ಜೀವನವನ್ನು ಆ ಮೂಲಾಗ್ರವಾಗಿ ಚಿತ್ರಿಸಿದ್ದಾರೆ. ಅವರ ಜನನ, ಬೆಳವಣಿಗೆ, ಮಾಡಿದ ಮಹತ್ ಸಾಧನೆಗಳನ್ನು ವಿವರಿಸಿದ್ದಾರೆ. ಹೀಗಾಗಿ ಇದೊಂದು ಪೌರಾಣಿಕ ಚರಿತ್ರೆಗಳ ಸಂಕಲನದ ಗ್ರಂಥವಾಗಿದೆ. ಶ್ರೀಶೇಷದಾಸರು ಎಂದು ಸ್ಮರಿಸಿಕೊಂಡಾಗ ಅವರ ಗತಜನುಮ ಸಾಧನೆ ಓದುಗರಿಗೆ ಒದಗಿಸಿ, ದಾಸವರೇಣ್ಯರ ಜೀವನ ವೈಶಿಷ್ಟ್ಯವನ್ನು ವಿವರಿಸಿದ್ದಾರೆ.

ಗ್ರಂಥದ ಕೊನೆಯಲ್ಲಿ ದಾಸರ ಅಂಶ ನಿರೂಪಿಸಿದ ಕೆಲವು ಸುಳಾದಿಗಳನ್ನು ಸಂಗ್ರಹಿಸಿದ್ದಾರೆ.

ಪೂಜ್ಯ ಶ್ರೀ ಗುರುಮಧ್ವರಾವ ಉಪ್ಪಲಿ ತಾತಾವರು ವಿಶೇಷ ಪರಿಶ್ರಮದಿಂದ, ಸಂಶೋಧಿಸಿದ, ಚಾರಿತ್ರಿಕ ಘಟನೆಗಳನ್ನು ಸಂಗ್ರಹಿಸಿದ ಸಂಶೋಧನಾತ್ಮಕ ಕೋಷ್ಟಕ ಅತ್ಯಂತ ಮಹತ್ವದ್ದು, ಉಪಯುಕ್ತವಾದುದು ಆಗಿದೆ. ಈ ಕೋಷ್ಟಕದಲ್ಲಿ ಬ್ರಹ್ಮಾಂಡ ಸೃಷ್ಟಿಯಾಗಿ ಮೊದಲುಗೊಂಡು, ಕೃತಯುಗ, ತ್ರೇತಾಯುಗ, ದ್ವಾಪುರಯುಗ, ಕಲಿಯುಗ, ಹೀಗೆ ಯುಗ ಯುಗಗಳಲ್ಲಿ ಶ್ರೀಹರಿಯ ಸೇವೆಗಾಗಿ, ಸತ್ಯ ಸಂಕಲ್ಪನ - ಇಚ್ಛೆ - ಸಂಕಲ್ಪ - ಅನುಸಾರ ಇಂದ್ರ ದೇವನು ಇಲ್ಲಿಯವರೆಗೆ ಅಂದರೆ ಶ್ರೀ ಶೇಷದಾಸರ ಜನಾಮದವರೆಗೆ ಹದಿನೇಳು ಸಲ ಅವತಾರ ಮಾಡಿದ್ದಾನೆಂಬುದನ್ನು ಪ್ರಮಾಣಯುಕ್ತವಾಗಿ ಕೋಷ್ಟಕದಲ್ಲಿ ಕೊಡಲಾಗಿದೆ. ಇಂಥ ಅಮೂಲ್ಯ ಸಂಗತಿಯನ್ನು ಸರ್ವರಿಗೂ ತಿಳಿಯುವಂತೆ ಮಾಡಿದ ತಾತಾವರಿಗೆ ಅನಂತ ಪ್ರಣಾಮಗಳು. ಈ ಕೋಷ್ಟಕದೊಂದಿಗೆ ಪ್ರಕಾಶನಗೊಂಡ ಈ ಗ್ರಂಥಕ್ಕೆ ಕಳಶಪ್ರಾಯವೆನಿಸಿದೆ.

ನನ್ನ ಮಿತ್ರರು ಹೊರತಂದ ಈ ಕೃತಿ ಅವರ ಚೊಚ್ಚಲ ಕೃತಿಯಾಗಿದೆ. ಇನ್ನು ಅನೇಕ ಕೃತಿಗಳು ಇದರಂತೆ ಇವರಿಂದ ಹೊರಬರಲೆಂದು ಹಾರೈಸುವೆ. ಈ ಗ್ರಂಥದ ಪ್ರಯೋಜನವನ್ನು ಸದ್‌ಭಕ್ತರು ಪಡೆಯುವರೆಂಬ ವಿಶ್ವಾಸವಿದೆ.

ಪಂಡಿತನಾನಲ್ಲ. ಶಾಸ್ತ್ರಬಲ್ಲವನಲ್ಲ. ಆದರೂ ಅಭಿಮಾನದಿಂದ ಒಂದೆರಡು ಮಾತನ್ನು ಬರೆಯಲು, ಪ್ರೇರೇಪಿಸಿದ ಪೂಜ್ಯ ಉಪ್ಪಲಿ ತಾತರವರಿಗೂ, ನನ್ನ ಮಿತ್ರರಿಗೂ ಅನಂತ ಧನ್ಯವಾದಗಳು.

|| ಶ್ರೀ ಮಧ್ವೇಶಾರ್ಪಿತ ||

|| ಶ್ರೀ ಕೃಷ್ಣಾರ್ಪಣ ಮಸ್ತು: ||

ಸತ್ಯನಾಥಕಾಲೋನಿ.
ರಾಯಚೂರು

ದಾಸ ದಾಸರ ದಾಸರ ಪದಧೂಳಿ
ಕೃಷ್ಣ ಜಾಲಹಾಳ



" ಶ್ರೀಪಾರ್ಥ ಸಾರಥ್ಯೆ ನಮಃ "

# ದಾಸವಾಣಿಯೇ ಪುಣ್ಯತೀರ್ಥ

## ಲೇಖಕನ ಎರಡು ಮಾತು

ಪರಾಶರರಿಂದ ಮತ್ಸ್ಯಗಂಧಿಯಲ್ಲಿ ಜನಿಸಿದವರು ವೇದವ್ಯಾಸ ಋಷಿವರೇಣ್ಯರು. ರಾಶಿ ರಾಶಿಯಾಗಿದ್ದ ವೇದಗಳನ್ನು ನಾಲ್ಕು ಭಾಗಗಳನ್ನಾಗಿ ವಿಂಗಡಿಸಿದವರು. ಅವುಗಳಲ್ಲಿದ್ದ ಬ್ರಹ್ಮಸೂತ್ರಗಳನ್ನು ಎತ್ತಿಹಿಡಿದರು. ಮತ್ತು ಅಷ್ಟಾದಶ ಪುರಾಣಗಳು, ಭಾಗವತಾದಿಗಳನ್ನು ರಚಿಸಿದರು, ಆದಕಾರಣ ಅವರಿಗೆ "ವೇದವ್ಯಾಸರೆಂದು" ಸಾರ್ಥಕ ನಾಮ ಪ್ರಾಪ್ತಿಯಾಯಿತು.

ಮಹಿಮಾನ್ವಿತರಾದ ವೇದವ್ಯಾಸರಿಂದ ವಿರಚಿಸಲ್ಪಟ್ಟ ಮಹಾಭಾರತವು, ಪಂಚಮ ವೇದವೆಂದು ಪ್ರಖ್ಯಾತ ನಾಮ ಪಡೆದಿದೆ. ಸಾಕ್ಷಾತ್ ಪರಮಾತ್ಮನೇ ದ್ವಾಪರದಲ್ಲಿ, ದೇವಕೀ ವಸುದೇವರ ಪ್ರೀತಿಯ ಪುತ್ರನಾಗಿ ಜನಿಸಿದ ಶ್ರೀಕೃಷ್ಣನು, ಮಹಾಭಾರತ ಯುದ್ಧದಲ್ಲಿ ನಿರಾಯುಧನಾಗಿ, ಪಾರ್ಥನ ಸಾರಥಿಯಾಗಿ, ಪಾಂಡವರ ವಿಜಯಕ್ಕೆ ಮುಖ್ಯ ಸೂತ್ರಧಾರಿ. ಅರ್ಜುನನು ನಾಮ ಮಾತ್ರಕ್ಕೆ ಯುದ್ಧ ಮಾಡಿದನೆಂದು ನೆಪಮಾತ್ರ ವೆನಿಸಿದರೂ ಪಾರ್ಥನ ಪಾತ್ರ ಪ್ರಧಾನವೆಂಬುದು ನಿಜ.

ಇಂದ್ರನು ಒಂದಂಶದಿಂದ ಅರ್ಜುನನಾಗಿ ಅವತಾರ ಮಾಡಿದವರೇ **ಶ್ರೀಶೇಷದಾಸರಾಗಿ** ಬಂದವರು. ಶ್ರೀದಾಸವರೇಣ್ಯರು ಮಾತೃಗರ್ಭದಿಂದಲೇ ಅಪರೋಕ್ಷಿಗಳು. ಗತಜನ್ಮದ ಅನುಭವ, ಮತ್ತು ಆಪತ್ತಿನ ಮಿತ್ರನೆನಿಸಿದ ಶ್ರೀಕೃಷ್ಣನ ಅಗಲಿಕೆಯ ಈ ಜನ್ಮದ ವಿರಹ ಅವರ ಅಂತರಂಗದಲ್ಲಿ ತಳಮಳಗೊಂಡ ವೇದನೆಯೇ, ಅನುಭವಿಸಿದ ನಿವೇದನೆಯಾಗಿಯೇ ನುಡಿದ ಸ್ಮೃತಿ ಸಮ್ಮತಿಗಳಾದ ಉಗಾಭೋಗ, ಸುಳಾದಿಗಳಾಗಿ, ಅವರು ನುಡಿದ ನುಡಿಗಳೇ ತಾವು ಕಳೆದ ಜನುಮದಲ್ಲಿ, ಇಂದ್ರಾಂಶ ಪಾರ್ಥನೆಂಬುದು ಸ್ಪಷ್ಟವಾಗಿ ತಿಳಿಸುತ್ತಿದ್ದ ನುಡಿಗಳು ತಿಳಿಸಿದ್ದಾರೆ.

1. ದ್ವಾಪರದಲ್ಲಿ ಅರ್ಜುನನು, ಧನಂಜಯ, ವಿಜಯ, ಸವ್ಯಸಾಚಿ, ಮೊದಲಾದ ದಶನಾಮಗಳಿಂದ ಪ್ರಖ್ಯಾತರಾಗಿ ದಶದಿಶಗಳಲ್ಲಿ ಕೀರ್ತಿ ಪಸರಿಸುವಂತೆ ಮಾಡಿದ ಕಾರ್ಯ, ಪಡೆದ ಅನುಭವಗಳನ್ನು ಸ್ಮರಿಸಿಕೊಂಡು :
2. ದ್ವೈತ ಮತ ಸ್ಥಾಪಕರಾದ ಶ್ರೀಮನ್ಮಧ್ವಾಚಾರ್ಯರು ರಚಿಸಿದ ಮೂವತ್ತೇಳು ಗ್ರಂಥಗಳನ್ನು ಹೊತ್ತು ಜ್ಞಾನಭಂಡಾರವನೇ ಸ್ಪರ್ಶ ಮಾತ್ರದಲ್ಲಿ ಪಡೆದ ಸೂತ್ರದಲ್ಲಿ ನುಡಿದ ವೃಷಬೇಂದ್ರರಾಗಿ ಧನ್ಯರಾದ ನೆನಪು ಒಂದು.

3. ಜಯತೀರ್ಥರಾಗಿ, ಆನಂದ ತೀರ್ಥರು ರಚಿಸಿದ ಗ್ರಂಥಗಳಿಗೆ ಟೀಕೆಯನ್ನು ರಚಿಸಿ, ಮಾಯಾವಾದಿಗಳನ್ನು ಜಯಿಸಿ, ಜ್ಞಾನ ಕಾರ್ಯಗಳನ್ನೇ ಮಾಡಿದ ಅನುಭವದ ನೆನಪಿಗೆ ಬಂದು.

4. ಈಗ ಧರೂರು ಗ್ರಾಮದ ಶ್ಯಾನುಭೋಗರ ವಂಶದಲ್ಲಿ ಶೇಷಗಿರಿರಾಯರಾಗಿ ಪ್ರಾಪಂಚಿಕ ಕಷ್ಟದಲ್ಲಿ ನೊಂದು, ಬೆಂದು, ಪಡೆದ ಕಹಿ, ಅನುಭವಗಳೊಂದಿಗೆ ಹಿಂದಿನ ಜನುಮಗಳ ಶಸ್ತ್ರಾಸ್ತ್ರ ಮತ್ತು ಶಾಸ್ತ್ರಗಳ ಅನುಭವಗಳು ಸೇರಿ ಹರಿದು ಬಂದ ಸುಳಾದಿಗಳೇ ಪುಣ್ಯತೀರ್ಥಗಳಾಗಿ ನಮ್ಮೆಲ್ಲರ ಉದ್ಧಾರಕ್ಕಾಗಿ.

ಚಿಂತರವೇಲಿ ಪ್ರಾಣದೇವರ ಸೇವೆ, ಆದಿಶಿಲಾಕ್ಷೇತ್ರವಾಸಿ ಶ್ರೀಶ್ರೀನಿವಾಸನ ಕೃಪೆ, ಇವರಿಗೆ ಸ್ವಪ್ನದಲ್ಲಿ ಅಂಕಿತವಿತ್ತ ಶ್ರೀ ವಿಜಯ ದಾಸರ ಆಶೀರ್ವಾದದಿಂದ, ಶೇಷದಾಸರಾಗಿ ಬಂದು ತಮ್ಮ ಚರಿತಾಮೃತವನ್ನು ನಮ್ಮ ಉದ್ಧಾರಕ್ಕಾಗಿ ನೀಡಿದ ಜ್ಞಾನಭಂಡಾರ.

ದಾಸವರೇಣ್ಯರ ಚರಿತ್ರೆಯನ್ನು ಸಾಧ್ಯವಾದಷ್ಟು ಸಂಕ್ಷಿಪ್ತವಾಗಿ ಬರೆಯಲಾಗಿದೆ. ಆದರೂ ಬಹಳಷ್ಟು ವಿಷಯಗಳನ್ನು ಸಂಗ್ರಹಿಸಿ ಬರೆಯಲಾಗಿದೆ. ಸಮಗ್ರವಾಗಿ, ಶ್ರೀ ಶೇಷದಾಸರ ಚರಿತ್ರೆ ಬರಿಯ ಬೇಕಾದರೆ ಶ್ರೀಮನ್ನಾರಾಯಣನು ಇಂದ್ರನ ಸಕಲ ಸದ್ಗುಣಗಳನ್ನು ಪರೀಕ್ಷಿಸಿ ದೇವೇಂದ್ರ ಪಟ್ಟವನ್ನು ಕಟ್ಟಿದಾರಭ್ಯದಿಂದ ಬರಿಯ ಬೇಕಾದರೆ, ಮಾನವನ ಒಂದು ಜನ್ಮ ಸಾಲದು, ಈ ಕಾಲಧಲ್ಲಿ, ಶ್ರೀಶೇಷದಾಸರು ದೇವಾಂಶ ಸಂಭೂತರು, ಇಷ್ಟೇಕೆ ಸಾಕ್ಷಾತ್ ದೇವೆಂದ್ರರೇ ಭಗದಾಜ್ಞಾನುಸಾರವಾಗಿ ನಮ್ಮನ್ನುದ್ಧರಿಸುವ ಸಂಕಲ್ಪದಿಂದಲೇ ಮಾನವ ಜನ್ಮದಲ್ಲಿ ಅರ್ಜುನನಾಗಿ, ಎತ್ತಾಗಿ, ಟೀಕಾಚಾರ್ಯರೆಂಬ ಬಿರುದಾದಂಕಿತರಾದ ಶ್ರೀ ಜಯತೀರ್ಥ ಯತಿಸಾರ್ವಭೌಮರಾಗಿ, ಮತ್ತು ಶೇಷದಾಸಾಗ್ರಣಿಗಳಾಗಿ ನಮ್ಮನ್ನು ಉದ್ಧಾರಮಾಡುತ್ತಿರುವರು. ಗ್ರಂಥವಿಸ್ತಾರವಾಗುವ ಭೀತಿಯಿಂದ, ಮುಖ್ಯವಾದ ಕೆಲವು ಅಂಶಗಳನ್ನು ಮಾತ್ರ ಸಂಗ್ರಹಮಾಡಿ ವಾಚಕರ ದೃಷ್ಟಿಗೆ ತಂದಿರುವೆನು.

ದಾಸಾವರ್ಯರ ಚರಿತ್ರೆ ಅಮೋಘವಾದದು. ಪ್ರಾರಂಭಕ್ಕೆ ನಿಲುಕದ ವಿಷಯ, ಅಂತ್ಯಸಾಧ್ಯಕ್ಕೆ ನಿಲುಕಲಾರದು. ಆದರೆ ಅಂತ್ಯ ತಿಳಿಯಲು ಈ ಜನ್ಮ ಸಾಲದು. ಇಂಥ ಮಹಾನುಭಾವರು ದೇವತೆಗಳೇ ಸರಿ. ಮಾನವರಲ್ಲ. ಇವರನ್ನು ಸಾಮಾನ್ಯ ಮಾನವರೆಂದು ಭಾವಿಸಿದಲ್ಲಿ. ಅದು ಅಪರಾಧವೇ ಸರಿ. ಭಕ್ತ ಶ್ರೇಷ್ಠರಾದವರು ಪ್ರತಿನಿತ್ಯ ದಾಸರಾಯರ ದಿವ್ಯ ಚರಿತೆಯನ್ನು ಪಠಿಸಿದರೆ ಸಕಲ ಆದಿವ್ಯಾಧಿ, ದುಃಸ್ವಪ್ನದೋಷ. ಶತೃಭಯ ನಿವಾರಣೆಯಾಗಿ ಆಯುರ್ರೋಗ್ಯ, ಸತ್ ಸಂತಾನಪ್ರಾಪ್ತಿ, ಸಂಪತ್ತು, ವಾಕ್ ಶುದ್ಧಿ, ಮೊದಲಾದ ಭಾಗ್ಯಲಭಿಸುವದು, ಇದಕ್ಕೆ ಶ್ರೀಪಾರ್ಥನ ಸಾರಥಿಯೇ ಸಾಕ್ಷಿಯಾಗಿರುವನು.

ಇಷ್ಟೇ ಅಲ್ಲದೆ ಪಂಚ ಮಹಾಪಾತಕಗಳನ್ನು ದೂರೋಡಿಸಲು ದಾಸರ ಚರಿತ್ರೆಯ ಪಠನ ಮಾತ್ರಸಾಕು.

ಕೃತ, ತ್ರೇತಾ, ದ್ವಾಪರ ಯುಗಗಳಲ್ಲಿ ಪರಮಾತ್ಮನು ಅವತಾರ ಮಾಡಿರುವನು. ಕೆಲವು

ಸಂಧರ್ಭಗಳಲ್ಲಿ ದೇವತೆಗಳಿಂದ ಅವತಾರ ಮಾಡಿಸಿ, ಅವರಿಂದ ಕೆಲವೊಂದು ಕಾರ್ಯಗಳನ್ನು ಮಾಡಿಸಿರುವನು, ಭಗವಂತನ ಆಜ್ಞಾನುಸಾರವಾಗಿಯೆ ಯುಗಯುಗಗಳಲ್ಲಿ ದೇವತೆಗಳು ಅವತರಿಸಿರುವರು. ಆದರೆ ಕಲಿಯುಗದ ಅಂತ್ಯದವರೆಗೆ ಶ್ರೀಹರಿ ಅವತಾರ ಮಾಡದೆ, ಕೇವಲ ದೇವತೆಗಳಿಂದ ಅವತಾರ ಮಾಡಿಸಿ ಪಾಮರರವುದ್ಧಾರ ಮಾಡಿಸುತ್ತಿರುವನು. ಅಂಥ ದೇವತೆಗಳಲ್ಲಿ ಸಾಕ್ಷಾತ್ ಇಂದ್ರನೆ ಒಂದು ಅಂಶದಿಂದ ಪಾಂಡವರ ಮಧ್ಯಮನಾದ ಅರ್ಜುನನಾಗಿ ಶ್ರೀಹರಿಯ ಆಜ್ಞಾನುಸಾರ ಅವತಾರಮಾಡಿರುವನು.

ಇದಲ್ಲದೆ ಇಂದ್ರನು ಕಲಿಯುಗದಲ್ಲಿ ಭೀಮಸೇನನ ಅಪರಾವತಾರವಾದ ಶ್ರೀಮನ್ಮಧ್ವಾಚಾರ್ಯರ ಹತ್ತಿರ ಅವರು ಬರೆದ ಮಹಾಗ್ರಂಥಗಳನ್ನು ಹೊತ್ತು ತಿರುಗಿದ ಎತ್ತಾಗಿ **"ಜಯತೀರ್ಥ"** ರೆಂಬ ಅಂಕಿತನಾಮವನ್ನು ಅಕ್ಷೋಭ್ಯತೀರ್ಥರಿಂದ ಪಡೆದ, ಧೋಂಡೋಪಂಥರು, ಆಮೇಲೆ ಮೊದಲಕಲ್ಲು ಶ್ರೀಶೇಷದಾಸರಾಗಿ, ಶ್ರೀವಿಜಯದಾಸರಿಂದ ಸ್ವಪ್ನದಲ್ಲಿ ' **"ಗುರುವಿಜಯವಿಠ್ಠಲ"** ರೆಂಬ ಅಂಕಿತ ಪಡೆದರು.

ಸಕಲವು ತಿಳಿದ ಪಂಡಿತಾಗ್ರಣಿಗಳು,ಇವರು ಮಾನವರಲ್ಲ, ದೇವತೆಗಳೆಂದು ತಿಳಿಸಿ ಹೇಳಬೇಕೆಂದು ಸವಿನಯದ ವಿನಂತಿ.

ಇಷ್ಟೆಲ್ಲ ಚರಿತ್ರೆಯನ್ನು ಸಂಕ್ಷಿಪ್ತವಾಗಿ ಬರಿಯಲು ಪ್ರೇರೇಪಿಸಿದ ಅಸ್ಮದ್ ಗುರುವರ್ಯರಾದ ಶ್ರೀ ಗುರುಮಧ್ವರಾವು ಉಪ್ಲಿಯವರು. ಶ್ರೀಹರಿ, ವಾಯು, ಗುರುಗಳು ಮಾಡಿದ ಅನುಗ್ರಹ, ಮತ್ತು ಶ್ರೀಗುರು ಮಧ್ವಾರಾವು ಉಪ್ಲಿಯವರ ಆಶೀರ್ವಾದವೇ ಈ ಕೃತಿ ಪೂರ್ಣವಾಗುವದಕ್ಕೆ ಕಾರಣವೆಂದು ನಂಬಿರುವೆನು.

ಇನ್ನು ಮುಂದೆ ನನ್ನ ಕಡೆಯಿಂದ ಅನೇಕವಾಗಿ ಶ್ರೀಹರಿಯು, ಮತ್ತು ದಾಸವರೇಣ್ಯರು ನೀಡಿದ ಜ್ಞಾನಭಂಡಾರದ ಅರಿವು ನೀಡಿ ಮುಂದೆ ಬರಿಯಲು ಮತ್ತಿಷ್ಟು ದೇವರ, ದಾಸರ ಸೇವೆ ಮಾಡಿಸುವ ಅನುಗ್ರಹ ನನ್ನ ಗುರುವರ್ಯರ ಕಡೆಯಿಂದ ಅನುಗ್ರಹ ದುಷ್ಟಿ ನನ್ನ ಮೇಲೆ ಬೀಳುವಂತೆ ಶ್ರೀಹರಿ ಕೃಪೆ ಮಾಡಲೆಂದು ಬಯಸುತ್ತಾ ನನ್ನ ಗುರುವರ್ಯರಿಗೆ ಅನಂತಪ್ರಣಾಮ ಅರ್ಪಿಸುತ್ತೇನೆ. ಇಂದ್ರನ ಅವತಾರಗಳು:1) ಅರ್ಜುನ. 2) ಗಾಧಿರಾಜ, 3) ಶ್ರೀರಾಮನ ಮಗ ಕುಶ. 4) ಮಂದ್ರದ್ಯುಮ್ನ, 5) ಪುರಂದರ, 6) ವಿಕುಕ್ಷಿ. 7) ವಾಲಿ.

ಇಂದ್ರನ ಅವತಾರಗಳ ವಿವರಣೆಯ ಕೋಷ್ಟಕವನ್ನು ಈ ಗ್ರಂಥದ ಕೊನೆಯಲ್ಲಿ ನೀಡಲಾಗಿದೆ.

ಶ್ರೀಯುತರಾದ ಎಂ. ಕೆ. ವಿಜಯೀಂದ್ರರವರು ಈ ಗ್ರಂಥದ ಮುದ್ರಣದ ಭಾರವನ್ನು, ತಾವೇ ಸ್ವಯಂ ತಮ್ಮ ನಿವಾಸಸ್ಥಾನಕ್ಕೆ ಶ್ರೀಮಾನ್ ಪೂಜ್ಯರಾದ ಶ್ರೀ ಭಾರತೀಶ ಪ್ರಿಂಟಿಂಗ್ ಯಜಮಾನರನ್ನು ಕರೆಯಿಸಿ, ಅವರ ದರ್ಶನ ಭಾಗ್ಯವನ್ನು ಕೊಡಿಸಿ, ನನ್ನನ್ನು ತಮ್ಮವನೇ ನಾನೆಂದು ಹೇಳಿ, ಕಾಳಜಿಯಿಂದ ಮುದ್ರಣ ಮಾಡಿಸಿ ಕೊಟ್ಟುದದಕೆ, ನಾನು ಚಿರಋಣಿಯಾಗಿದ್ದೇನೆ.

ಶ್ರೀವಿಜಯೀಂದ್ರರವರಿಗೆ ಶ್ರೀಶೇಷದಾಸಾಂತರ್ಗತ ಭಾರತೀರಮಣ ಮುಖ್ಯ ಪ್ರಾಣಾಂತರ್ಗತ ನನ್ನ ಕುಲಸ್ವಾಮಿ ತಿರುಪತಿಯ ತಿರುಮಲೇಶನು, ಶ್ರೀಪಾರ್ಥನ ಸಾರಥಿ ಸತ್ಕಾರ್ಯಗಳಲ್ಲಿ ಮನಸ್ಸಿಡುವಂತೆ ಸದ್ಬುದ್ಧಿಯನ್ನೀಯಲಿ ಎಂದು ಪ್ರಾರ್ಥಿಸುತ್ತೇನೆ, ಭಗವಂತನು ಅವರಿಗೆ ಆಯುರಾರೋಗ್ಯ ಸಂಪತ್ತನ್ನೀಯಲಿ ಎಂದು ಪ್ರಾರ್ಥಿಸುತ್ತೇನೆ.

ಶ್ರೀಮಾನ್ ಪೂಜ್ಯರಾದ ಶ್ರೀ ಭಾರತೀಶನ ಮುಖ್ಯ ಭಕ್ತರಾದ ಶ್ರೀ ಭಾರತೀಶ ಎಂಟರ್ ಪ್ರೈಸಸ್ ಇವರು, ನನ್ನ ತೆಲುಗು ಲಿಪಿಯಲ್ಲಿ ಬರೆದ ದಾಸವರ್‍ಯರ ಚರಿತೆಯನ್ನು, ಕನ್ನಡ ಲಿಪಿಯಲ್ಲಿ ಪರಿವರ್ತಿಸಿ, ಮುದ್ರಿಸಿ, ಅಪಾರವಾದ ಅನುಗ್ರಹ ಮಾಡಿರುವರು, ಮತ್ತು ನನ್ನ ಮನಸ್ಸಿನಂತೆ ನಾನು ಹೇಳಿದ ದಿನಕ್ಕೆ ಪರಿಯಾಗಿ, ಗ್ರಂಥವನ್ನು ಸುಂದರವಾಗಿ ಸಿದ್ಧ ಪಡಿಸಿ ಕೊಟ್ಟಿರುವರು.

ನನಗಾಗಿ ಅವರು ಪಟ್ಟ ಶ್ರಮಕ್ಕೆ ನಾನು ಅವರನ್ನು ಅಭಿನಂದಿಸುತ್ತೇನೆ.

ಪೂಜ್ಯರಾದ ಜಾಲಿಹಾಳ್ ಕೃಷ್ಣರಾಯರು, ಸಹೃದಯದಿಂದ ನನ್ನ ಗ್ರಂಥದ ಕರಡು ಪ್ರತಿಯನ್ನು ನೋಡಿ ಅದರಲ್ಲಿರುವ ತಪ್ಪು ಮುದ್ರಣವನ್ನು ಸರಿಪಡಿಸಿ, ಅಮೂಲಾಗ್ರ ಓದಿ ಸಂತಸ ಪಟ್ಟಿದ್ದು ನನ್ನ ಭಾಗ್ಯವೆಂದು ಭಾವಿಸುತ್ತೇನೆ. ನನಗೆ ಅವರು ಮಾಡಿದ ಸಹಾಯಕ್ಕೆ ಅವರಿಗೆ ನಾನು ಅಭಾರಿಯಾಗಿದ್ದೇನೆ.

ಶ್ರೀದಾಸವರ್ಯರ ದಾಸಾನುದಾಸ
ಪಿ. ರಾಮಚಂದ್ರರಾವು
ರಾಯಚೂರು

|| ಶ್ರೀಪಾರ್ಥ ಸಾರಥೇ ನಮಃ ||

# ಪಾಂಡವ ಮಧ್ಯಮನಾದ ಶ್ರೀ ಅರ್ಜುನ

ಹಸ್ತಿನಾಪುರದಲ್ಲಿ ಪಾಂಡವರು ಕುಂತಿಸಮೇತರಾಗಿ ಪಾಂಡುರಾಜನ ಮರಣಾನಂತರ ಧೃತರಾಷ್ಟ್ರನ ಹತ್ತಿರವೇ ಇದ್ದರು. ದೊಡ್ಡಪ್ಪನ ಮಕ್ಕಳಾದ ದುರ್ಯೋಧನಾದಿಗಳ ಸಂಗಡ ರಾಜ ಗುರುಗಳಾದ ಕೃಪಾಚಾರ್ಯರು, ದ್ರೋಣಾಚಾರ್ಯರು, ಅಶ್ವತ್ಥಾಮರಿಂದ ಸಕಲ ಧನುರ್ವಿದ್ಯಾದಿಗಳನ್ನು ಕಲಿಯುತ್ತಿದ್ದರು. ಪಾಂಡವರು ಚುರುಕಾದ ಬುದ್ಧಿಯುಳ್ಳವರಾದ್ದರಿಂದ ಪ್ರತಿ ವಿದ್ಯಗಳಲ್ಲೂ ಮುಂದಕ್ಕೆ ಹರಿದು ಹೋಗುತ್ತಿದ್ದರು. ದ್ರೋಣಾಚಾರ್ಯರು ಅರ್ಜುನನಿಗೆ ಸಕಲ ಧನುರ್ವಿದ್ಯದ ಸೂತ್ರಗಳನ್ನು ಕೂಲಂಕುಷವಾಗಿ ಕಲಿಸಿ "ಪಾರ್ಥಾ! ನಿನಗೆ ಮುಂದೆ ಸಮರಾದ ಶೂರರು ಮತ್ತಾರು ಇರುವುದಿಲ್ಲ. ಸಕಲ ವಿದ್ಯಾಗಳನ್ನು ಪ್ರತ್ಯೇಕವಾಗಿ ನಿನಗೆ ಕಲಿಸಿರುವೆನು, ಎಲ್ಲಾ ವಿದ್ಯಾಗಳಲ್ಲಿ ಪಾರಂಗತನಾಗಿರುವೆ. ಸದಾ ನಿನಗೆ ಜಯವಾಗಲಿ. ಅಪಜಯದ ಸ್ವರ ಇನ್ನುಮುಂದೆ ನಿನ್ನ ಹತ್ತಿರಕ್ಕೆ ಬರಲಾರದು." ಎಂದು ಆಶೀರ್ವಾದ ಮಾಡಿದರು.

ಈ ವಿಧದ ಅರ್ಜುನನ ಪ್ರಗತಿಯನ್ನು ಕಂಡ ದುರ್ಯೋಧನಾದಿಗಳು ಅಸೂಯದಿಂದ ನಾನಾ ಹಿಂಸೆಗಳನ್ನು ಕೊಟ್ಟರು, ಆದರು ದುರ್ಯೋಧನನು ಪಾಂಡವರ ನಿರ್ಮೂಲನ ಮಾಡಲು ಬಗೆ ಬಗೆಯ ಆಲೋಚನೆ ಮಾಡುತ್ತಿದ್ದನು. ಅವನಿಗೆ ಅದು ಒಂದು ತೀರಲಾರದ ಚಿಂತೆಯಾಯಿತು. ತಮ್ಮ ತಾಯಿ ಗಾಂಧಾರಿಯ ಸಹೋದರನಾದ ಶಕುನಿ ಮಾವನ ಸಂಗಡ ಏಕಾಂತದಲ್ಲಿ ತಮ್ಮಂದಿರ ಸಹಿತ ಕುಳಿತು ಆಲೋಚಿಸುತ್ತಿರಲು, ಒಂದು ದಿನ ಧೃತರಾಷ್ಟ್ರನು ತನ್ನ ಮಕ್ಕಳಿಗೆ ಪಾಂಡವರಿಂದ ಆಗುತ್ತಿರುವ ಸಂಕೋಚವನ್ನು ಕಂಡು, ಧರ್ಮರಾಯನನ್ನು ಅವನ ತಾಯಿ ಮತ್ತು ತಮ್ಮಂದಿರನ್ನು ತನ್ನ ಹತ್ತಿರಕ್ಕೆ ಬರಮಾಡಿ ಕೊಂಡು, "ನಿಮ್ಮಗಳಿಗೆ ಸ್ವಾತಂತ್ರ್ಯವಾಗಿರಲು ಬೇರೆ ನಿವಾಸ ಮಾಡುವೆನು. ನೀವೆಲ್ಲರು ಅಲ್ಲಿ ಸುಖವಾಗಿ ಇದ್ದು ಬಿಡಿರಿ"ಎಂದು ಹಿತವಚನದ ಮಾತು ಹೇಳಿದನು. ಅದಕ್ಕೆ ಪಾಂಡವರು ಸಮ್ಮತಿಸಿದರು. ಈ ಸಂದರ್ಭವನ್ನು ಉಪಯೋಗಿಸಿಕೊಳ್ಳಲು ಸರಿಯಾದ

ಸಮಯವೆಂದು ಯೋಚಿಸಿ ಸೋದರಮಾವನ ಮುಂದೆ "ನಮ್ಮ ತಂದೆ ಪಾಂಡವರಿಗೆ ಬೇರೆ ಮನೆಯಲ್ಲಿ ಇರಿಸುವ" ತಂದೆಯ ಮಾತನ್ನು ತಿಳಿಸಿ, "ನಾವು ಅವರಿಗಾಗಿ ಇಂದ್ರಪ್ರಸ್ಥದಲ್ಲಿ ಒಂದು ಅರಗಿನ ಮನೆ ನಿರ್ಮಾಣ ಮಾಡಿಸಿ ಅಲ್ಲಿಗೆ ಪಾಂಡವರನ್ನು ಕಳಿಸೋಣ. ಅಂದು ರಾತ್ರಿಯಲ್ಲಿ ಆ ಮನೆಗೆ ಬೆಂಕಿ ಹಚ್ಚಿಸಿ ಪಾಂಡವರನ್ನು ನಿರ್ಮೂಲ ಮಾಡಲು ಇದು ಒಂದು ಒಳ್ಳೆ ಸಂದರ್ಭ ಒದಗಿದೆ. ಇದನ್ನು ಈಗ ನಾವು ಉಪಯೋಗಿಸಿ ಕೊಳ್ಳಬೇಕೆಂದು" ತಿಳಿಸಿ, ನೂತನ ಗೃಹದ ಆರಂಭವನ್ನು ಮಾಡಿಸಿದರು. ಆ ಗೃಹ ಕೇವಲ ಅರಗಿನದಾಗುವಂತೆ ಏರ್ಪಾಟು ಮಾಡಿದರು, ಕೆಲವೇ ಕಾಲದಲ್ಲಿ ಲಕ್ಷಾಗೃಹವು ಅತಿಸುಂದರವಾಗಿ ನಿರ್ಮಾಣವಾಯಿತು. ದುರ್ಯೋಧನನು ತನ್ನ ತಂದೆಗೆ ನೂತನ ಗೃಹದ ಬಗ್ಗೆ ವರ್ಣಿಸಿ ತಿಳಿಸಿದನು. ಆ ಮಾತನ್ನು ಕೇಳಿದ ಕುರುರಾಜನು ಸಂತಸ ಗೊಂಡು ಪಾಂಡವರನ್ನು ಕರೆದು "ದುರ್ಯೋಧನನು ನಿಮಗಾಗಿ ನಿರ್ಮಾಣ ಮಾಡಿಸಿದ ನೂತನ ಗೃಹಕ್ಕೆ ಹೋಗಿ ಅಲ್ಲಿ ಸುಖವಾಗಿ ಇದ್ದು ಬಿಡಿರಿ". ಎಂದು ಹೇಳಿದನು. ಆ ಗೃಹ ಅರಗಿನಿಂದ ನಿರ್ಮಾಣ ಮಾಡಿಸಿದ ವಿಷಯ ಕುರುರಾಜನಿಗೆ ತಿಳಿಯದು. ಆದರೆ ಆ ಗೃಹದ ವಿಷಯ ಪಾಂಡವರ ಆತ್ಮೀಯನಾದ ವಿದುರನಿಗೆ ಮಾತ್ರ ತಿಳಿದಿತ್ತು. ವಿದುರನು ಯಾರಿಗೂ ತಿಳಿಯದಂತೆ ಲಕ್ಷಾ ಗೃಹದಿಂದ ದೂರ ಅರಣ್ಯದವರೆಗೆ ಒಂದು ಸುರಂಗಮಾರ್ಗವನ್ನು ನಿರ್ಮಿಸಿದ್ದನು. ಪಾಂಡವರು ಗೃಹ ಪ್ರವೇಶ ಮಾಡಿದ ರಾತ್ರಿಯೇ ಅಗ್ನಿ ಹಚ್ಚುವ ಸಮಾಚಾರ ತಿಳಿದ ವಿದುರನು, ಪಾಂಡವರಿಗೆ ತಿಳಿಸಿ ಅದೇ ಮನೆಯಲ್ಲಿ ತಾನು ನಿರ್ಮಾಣ ಮಾಡಿಸಿದ ಗುಪ್ತ ಮಾರ್ಗದ ಪರಿಚಯ ಮಾಡಿಸಿ ಅವರಿಗೆ ಎಲ್ಲಾ ವಿಧದ ಎಚ್ಚರಿಕೆಯನ್ನಿತ್ತು ಹೊರಟುಹೋದನು. ಆ ದಿನ ರಾತ್ರಿ ಎಲ್ಲರೂ ಸುಖದ ನಿದ್ರೆಯಲ್ಲಿರಲು, ಹೊಂಚುಹಾಕಿ ಕುಳಿತಿದ್ದ ದುರ್ಯೋಧನನ ದೂತರು ಎಲ್ಲರೂ ನಿದ್ರೆಯಲ್ಲಿರುವುದನ್ನು ಕಂಡು ಬೆಂಕಿ ಹಚ್ಚಿಬಿಟ್ಟರು. ಪಾಂಡವರು ನಿದ್ರೆಯಿಂದ ಗಾಬರಿಗೊಂಡು ಎದ್ದು, ವಿದುರನು ತೋರಿಸಿದ ಸುರಂಗ ಮಾರ್ಗದಿಂದ ತಾಯಿಯ ಸಮೇತ ಆರು ಜನ ಒದಗಿದ ವಿಪತ್ತಿನಿಂದ ಪಾರಾಗಿ ಅರಣ್ಯ ಮಾರ್ಗವಾಗಿ ರಾತ್ರಿಯಲ್ಲಾ ನಡೆದು ಕೊಂಡು ಒಂದು ಗ್ರಾಮವನ್ನು ಬ್ರಾಹ್ಮಣರ ವೇಷದಿಂದ ಸೇರಿದರು. ಆ ಗ್ರಾಮದ ಒಬ್ಬ ಗೃಹಸ್ಥನು ಅವರಿಗೆ ಆಶ್ರಯವಿತ್ತನು.

ಇತ್ತ ಇಂದ್ರಪ್ರಸ್ತ ಪುರದಲ್ಲಿ ಆ ದಿನ ರಾತ್ರಿ ಬಹಳ ಕತ್ತಲಾದ ಬಳಿಕ ಯಾವುದೋ ಮಾರ್ಗ ಹಿಡಿದು ಹೋಗುವಾಗ ಆರುಜನರು ಮಾರ್ಗಾಯಾಸ ಮತ್ತು ರಾತ್ರಿ ಬಹಳವಾದ್ದರಿಂದ ಮಾರ್ಗಮಧ್ಯದಲ್ಲಿ ಅತಿಸುಂದರವಾದ ವಿಶಾಲವಾದ ಕಟ್ಟೆಗಳಿಂದ ಕೂಡಿದ ಮನೆಯನ್ನು ಕಂಡು, ಆ ರಾತ್ರಿ ಅಲ್ಲಿ ಕಳೆದು ಬೆಳಿಗ್ಗೆ ಹೋದರಾಯಿತೆಂದು ಆ ಮನೆ ಕಟ್ಟೆಯ ಮೇಲೆ ವಿಶ್ರಮಿಸಿದ್ದರು. ಅತಿ ಶೀಘ್ರದಲ್ಲಿ ದಣಿದು ಬಂದವರಿಗೆ ಗಾಢವಾದ ನಿದ್ರೆ ಆವರಿಸಿತು, ಆ ರಾತ್ರಿಯೆ ಮನೆಸುಟ್ಟು ಬೂದಿಯಾಗಿ ಹೋಗಿತು.

ಮರುದಿನ ಲಕ್ಷಾಗೃಹ ಸುಟ್ಟುಹೋದ ವಾರ್ತೆ ಕೌರವರಿಗೆ ತಲುಪಿತು. ಮನಸಿನಲ್ಲಿ ಸಂತಸ ಗೊಂಡ ದುರ್ಯೋಧನನು, ಶಕುನಿ ಮತ್ತು ತಮ್ಮಂದಿರ ಸಹಿತ ಇಂದ್ರಪ್ರಸ್ತಕ್ಕೆ ಬಂದು ನೋಡಲು ಆ ಸುಟ್ಟು ಹೋದ ಮನೆಯಲ್ಲಿ ಆರು ಮಂದಿ ಸುಟ್ಟು ಭಸ್ಮವಾದ ಗುರುತುಗಳನ್ನು ಕಂಡು, "ಇನ್ನು

ಮುಂದೆ ಪಾಂಡವರಿಂದ ನಮಗೆ ಬಾಧೆ ಇಲ್ಲದಂತಾಯಿತು. ಇನ್ನು ನಾವು ಸ್ವತಂತ್ರರು" ಎಂದು ಹಿಗ್ಗುತ್ತಾ ಮಾತನಾಡಿಕೊಂಡು ಹಸ್ತಿನಾವತಿಗೆ ತೆರಳಿ ತಂದೆಯಾದ ಧೃತರಾಷ್ಟ್ರನಿಗೆ ಪಾಂಡವರಾರು ಜನ ನೂತನ ಗೃಹ ಸುಟ್ಟು ಅವರು ಸಹ ಮೃತರಾದರೆಂದು ತಿಳಿಸಿದರು. ಧೃತರಾಷ್ಟ್ರನು " ನನ್ನ ತಮ್ಮನ ವಂಶ ಹಾಳಾಯಿತೇ" ಎಂದು ದುಃಖ ಪಟ್ಟವನಂತೆ ನಟಿಸಿದನು.

ಅತ್ತ ಪಾಂಡವರು ನಿವಾಸ ಮಾಡಿದ ಗ್ರಾಮದಲ್ಲಿ ಬಕಾಸುರನೆಂಬ ಒಬ್ಬ ರಾಕ್ಷಸ ಹಾವಳಿಯಿಂದ ಆ ಗ್ರಾಮದವರು ಬೇಸರಗೊಂಡು ರಾಕ್ಷಸನ ಕೂಡ ಒಂದು ಒಪ್ಪಂದ ಮಾಡಿಕೊಂಡಿದ್ದರು. ಅದೇನೆಂದರೆ ! ಪ್ರತಿ ದಿನ ರಾಕ್ಷಸನು ಗ್ರಾಮದ ಮೇಲೆ ಬಿದ್ದು ಕೈಗೆ ಸಿಕ್ಕವರನ್ನು ಹತ ಮಾಡಿ ಕಬಳಿಸುತ್ತಿದ್ದನು. ದನಕರುಗಳು, ಮಕ್ಕಳು ಯಾರು ಸಿಕ್ಕರೆ ಅವರನ್ನೆಲ್ಲಾ ತಿಂದು ಬಿಡುತ್ತಿದ್ದನು. ಒಂದು ದಿನ ಗ್ರಾಮದವರೆಲ್ಲಾ ಕೂಡಿ ಕೊಂಡು, ರಾಕ್ಷಸನ ಕೂಡ "ಪ್ರತಿದಿನ ನಮ್ಮ ಗ್ರಾಮದವರನ್ನು ಮನೆಗೆ ಒಬ್ಬರನ್ನು ಬಂಡಿ ತುಂಬ ಅನ್ನ ಎರಡು ಎತ್ತಿನ ಸಮೇತವಾಗಿ ಪಾಳಿಯ ಪ್ರಕಾರವಾಗಿ ನಿನಗೆ ಆಹಾರವಾಗಿ ಕಳಿಸುತ್ತೇವೆ. ದಯವಿಟ್ಟು ನಿನ್ನ ದೌರ್ಜನ್ಯವನ್ನು ನಿಲ್ಲಿಸೆಂದು" ಬೇಡಿಕೊಂಡರು. ಅದರಂತೆ ಅವನು ಒಪ್ಪಿದ್ದನು. ಆದರೆ ಈಗ ಪಾಂಡವರಿಗೆ ಆಶ್ರಯವಿತ್ತವರ ಪಾಳಿ ಬಂದಿತ್ತು. ಬೆಳಗೆದ್ದರೆ ತನಗೆ ಇದ್ದ ಒಬ್ಬನಾದ ಮಗನನ್ನು ರಾಕ್ಷಸನ ಆಹಾರವಾಗಿ ಕಳಿಸಬೇಕಲ್ಲಾ ಎಂದು ಮನೆಯವರೆಲ್ಲಾ ಅಳುತ್ತ ಕುಳಿತ್ತಿದ್ದರು. ಅವರನ್ನು ಕುಂತಿದೇವಿ "ಏಕೆ ಅಳುತ್ತಿರುವಿರಿ? ಏನಾಯಿತು?" ಎಂದು ವಿಚಾರಿಸಲು. ಮನೆಯವರು ಕಾರಣವನ್ನು ವಿಶದಪಡಿಸಿ ತಿಳಿಸಿದರು. ಆಗ ಕುಂತಿದೇವಿ "ನೋಡಿ ಇನ್ನು ಮುಂದೆ ನೀವು ಅಳುವ ವಿಚಾರವನ್ನು ಬಿಟ್ಟು ಬಿಡಿ. ನನಗೆ ಆರುಜನ ಮಕ್ಕಳಿದ್ದಾರೆ. ಅವರಲ್ಲಿ ಎರಡನೇಯವನು ಬಲು ಬಲಶಾಲಿ, ದೊಡ್ಡ ದೇಹಯುಳ್ಳವನು. ಅವನೊಬ್ಬನೆ ಸಾಕು, ರಾಕ್ಷಸನ ಆಹಾರಕ್ಕೆ. ಇನ್ನುಮುಂದೆ ನೀವು ರಾಕ್ಷಸನಿಗಾಗಿ ಬಂಡಿ ತುಂಬ ಅನ್ನವನ್ನು ಮಾತ್ರ ಸಿದ್ದಮಾಡಿರಿ. ಉಳಿದ ವಿಚಾರ ನನ್ನ ಮಗನಿಗೆ ಬಿಟ್ಟುಬಿಡಿ." ಎಂದು ಸಮಾಧಾನ ಮಾಡಿದಳು. ಬೆಳಗಾಯಿತು, ಬಂಡಿ ತುಂಬ ಅನ್ನ ತುಂಬಲಾಗಿತ್ತು. ಕುಂತಿದೇವಿ ತನ್ನ ಎರಡನೆಯ ಮಗನಾದ ಭೀಮಸೇನನನ್ನು ಕರೆದು ನಡೆದ ವಿಚಾರ ತಿಳಿಸಿದಳು. ತಾಯಿಯ ಮಾತನ್ನು ಕೇಳಿದ ಭೀಮಸೇನನು ಮುಗಳ್ನಗೆಯಿಂದ ಕೇಳಿ ನಗುತ್ತ "ಅಮ್ಮಾ! ನೀನು ಹೇಳಿದಂತೆಯೇ ನಾನು ರಾಕ್ಷಸನ ಹತ್ತಿರಕ್ಕೆ ಹೋಗುವೆನು," ಎಂದು ಹೇಳಿ ತಾಯಿಗೆ ನಮಸ್ಕರಿಸಿ ಬಂಡಿ ಹತ್ತಿ ಕುಳಿತು ರಕ್ಕಸನ ನಿವಾಸವಾದ ಅರಣ್ಯಕ್ಕೆ ತೆರಳಿದನು. ಮಾರ್ಗಮಧ್ಯದಲ್ಲಿ ಸುತ್ತ ನಾಲ್ಕು ಕಡೆ ನೋಡುತ್ತ ನಿಧಾನವಾಗಿ ಬಂಡಿಯನ್ನು ನಡೆಸುತ್ತಾ ಹೋಗುತ್ತಿರಲು ಎಲ್ಲಿಂದಲೋ ರಾಕ್ಷಸನ ಭೀಕರವಾದ ಕರ್ಕಶ ಧ್ವನಿ ಕೇಳಿಬಂದಿತು. ಆ ಶಬ್ಧ ಕೇಳಿ ಭೀಮಸೇನನು ಅಲ್ಲಿಯೇ ಬಂಡಿ ನಿಲ್ಲಿಸಿ, ಬಂಡಿಯಲ್ಲಿದ್ದ ಅನ್ನವನ್ನು ತಿನ್ನಲಾರಂಭಿಸಿದನು. ಸ್ವಲ್ಪ ಹೊತ್ತಿನಲ್ಲೆ ಅನ್ನವನ್ನೆಲ್ಲಾ ತಿಂದು ಮುಗಿಸಿ ಬಿಟ್ಟನು. ಅಲ್ಲಿಯೆ ಹತ್ತಿರವಿದ್ದ ನೀರಿಗೆ ಹೋಗಿ ಕೈತೊಳೆದು ಕೊಂಡು ನೀರು ಕುಡಿಯುತ್ತಿರಲು, ತನ್ನ ಎಡದ ಭುಜದ ಮೇಲೆ ಯಾರೋ ಕೈಹಾಕಿದಂತೆ ಭಾಸವಾಯಿತು. ಭೀಮಸೇನನು ತನ್ನ ಎಡಗೈಯಿಂದ ತನ್ನ ಭುಜದ ಮೇಲಿದ್ದ ಕೈಯನ್ನು ಹಿಡಿದು ತನ್ನ ಮುಂದುಗಡೆಗೆ

ಎಳೆದು ಝಾಡಿಸಿದನು. ಭೀಮನ ಆ ಬಲವಾದ ಎಳೆತದಿಂದ ಅತಿ ವೇಗವಾಗಿ ರಾಕ್ಷಸನು ಮುಂದಕ್ಕೆ ಹೋಗಿ ಬಿದ್ದು ಬಿಟ್ಟನು. ಸ್ವಲ್ಪ ಹೊತ್ತಿನ ಮೇಲೆ ಚೇತರಿಸಿಕೊಂಡು, "ಎಲಾ! ದ್ರೋಹಿ, ನನಗಾಗಿ ಗ್ರಾಮದವರು ಕಳಿಸಿದ ಅನ್ನವನ್ನೆಲ್ಲಾ ನೀನು ತಿಂದು ಬಿಟ್ಟೆಯಾ! ಎಂಥಾ ವಿಶ್ವಾಸ ಘಾತುಕ! ಕಾದುಕೋ ಇನ್ನು ನಿನ್ನನ್ನು ಸಜೀವವಾಗಿ ನುಂಗಿ ಬಿಡುವೆನು." ಎಂದು ಆರ್ಭಟಿಸುತ್ತ ಭೀಮಸೇನನ ಮೇಲೆ ಬೀಳುವಷ್ಟರಲ್ಲಿ ಭೀಮಸೇನನು ಪಕ್ಕಕ್ಕೆ ಸರಿದು ರಾಕ್ಷಸನನ್ನು ಒಂದೇ ಮುಷ್ಠಿಯಿಂದ ಅವನ ಬೆನ್ನಿನಲ್ಲಿ ಹೊಡೆದನು. ರಾಕ್ಷಸನು ನೆಲಕ್ಕೆ ಬಿದ್ದು ರಕ್ತವನ್ನು ಕಾರಿ ಸತ್ತು ಹೋದನು.

ಭೀಮಸೇನನಿಗೆ ರಾಕ್ಷಸನನ್ನು ಕೊಂದ ಕಾರಣ ತನ್ನ ದೇಹವೆಲ್ಲ ರಕ್ತಸಿಕ್ತವಾಗಿತ್ತು. ಅಲ್ಲೇ ಹರಿಯುತ್ತಿರುವ ನೀರಿನಲ್ಲಿ ದೇಹವನ್ನು ತೊಳೆದು ಕೊಂಡು, ಬಂಡಿಗೆ ಎತ್ತುಗಳನ್ನು ಕಟ್ಟಿಕೊಂಡು ಗ್ರಾಮಕ್ಕೆ ಸಂತೋಷದಿಂದ ತಿರಿಗಿ ಬಂದನು. ಅವನನ್ನು ಕಂಡು ಗ್ರಾಮಸ್ತರು ಆಶ್ಚರ್ಯದಿಂದ "ಏನು ರಾಕ್ಷಸನು ಕಾಣಲಿಲ್ಲವೇ? ಬಂಡಿಯ ಅನ್ನ ಏನಾಯಿತು?" ಎಂದು ಕೇಳಿದರು. ಆಗ ಭೀಮಸೇನನು ನಡೆದ ವಿಷಯ ತಿಳಿಸಿದನು. ಆಗ ಗ್ರಾಮದ ಜನರಿಗೆ ರಾಕ್ಷಸನು ಸತ್ತು ತಮಗೆ ಬಂದ ಆಪತ್ತು ಪರಿಹಾರವಾದುದಕ್ಕೆ ಅತಿ ಸಂತೋಷವಾಯಿತು. ಭೀಮಸೇನನನ್ನು ಬಹು ವಿಧದಿಂದ ಶ್ಲಾಘಿಸಿದರು. ಕುಂತಿದೇವಿಗೆ ತಮ್ಮ ಕೃತಜ್ಞತೆಯನ್ನು ತಿಳಿಸಿದರು. ಎಲ್ಲರು ಆನಂದದಿಂದ ಹಬ್ಬವನ್ನು ಮಾಡಿಕೊಂಡರು.

ಎರಡು ಮೂರು ದಿನಗಳ ನಂತರ ಪಾಂಚಾಲ ದೇಶದ ರಾಜನಾದ ದೃಪದ ರಾಜನು ತನ್ನ ಮಗಳಾದ ದ್ರೌಪತಿಯ ಸ್ವಯಂವರದ ವಿಷಯ ಪ್ರಕಟಿಸಿದ ವಾರ್ತೆ ಕೇಳಿ ಬರಲು, ಧರ್ಮರಾಜನು ತನ್ನ ಸಹೋದರರನ್ನು ಕೂಡಿಕೊಂಡು, ಬ್ರಾಹ್ಮಣರ ವೇಷದಲ್ಲೇ ಪಾಂಚಲ ನಗರಕ್ಕೆ ಪ್ರಯಾಣ ಬೆಳೆಸಿದನು.

ಪಾಂಚಾಲದೇಶದಲ್ಲಿ ದೃಪದರಾಜನು ಅತಿ ಸುಂದರವಾದ ಸ್ವಯಂವರ ಮಂಟಪವನ್ನು ನಿರ್ಮಾಣ ಮಾಡಿಸಿದ್ದನು. ಐವತ್ತಾರು ರಾಜ್ಯಗಳ ರಾಜರು ಉಚಿತ ಆಸನಗಳಲ್ಲಿ ಕುಳಿತಿದ್ದರು. ಆ ವೈಭವವನ್ನು ನೋಡಲು ಬಂದವರಿಗೆ ಪ್ರತ್ಯೇಕ ಸ್ಥಳ, ಮತ್ತು ಸ್ತ್ರೀಯರಿಗೆ. ಬ್ರಾಹ್ಮಣರಿಗೆ ಇನ್ನೊಂದು ಕಡೆ ಆಸನಾದಿಗಳನ್ನು ಹಾಕಿದ್ದರು. ಬ್ರಾಹ್ಮಣರ ವೇಷಧರಿಸಿದ ಪಾಂಡವರು ವಿಪ್ರ ಸಮೂಹದಲ್ಲಿ ಬಂದು ಕುಳಿತರು. ಸ್ವಲ್ಪ ಹೊತ್ತಿನ ಮೇಲೆ ದೃಪದನು ತನ್ನ ಮಗಳು ದ್ರೌಪತಿದೇವಿ ಸಮೇತನಾಗಿ ತಮಗಾಗಿ ಪ್ರತ್ಯೇಕ ಇರಿಸಿದ ಆಸನಗಳಲ್ಲಿ ಕುಳಿತರು.

ಸಭಾ ಕಾರ್ಯಕ್ರಮ ಪ್ರಾರಂಭ ಮಾಡುವದಾಗಿ ರಾಜನು ಮಂತ್ರಿಯನ್ನು ತನ್ನ ಬಳಿ ಕರೆದು ಸೂಕ್ಷ್ಮವಾಗಿ ಸೂಚಿಸಿದನು. ರಾಜನ ಅಪ್ಪಣೆಯಂತೆ ಮಂತ್ರಿ ವರ್ಯರು. ಸಭೀಕರನ್ನು ಉದ್ದೇಶಿಸಿ "ಸಭಾ ಮಂಟಪಕ್ಕೆ ಆಗಮಿಸಿದ ರಾಜರು, ಮಹಾರಾಜರು, ಪಂಡಿತರು ಮತ್ತು ಇತರ ಮಹಾಶಯರೇ! ರಾಜಾಜ್ಞೆಯಂತೆ ಇನ್ನು ಕೆಲವು ಕ್ಷಣಗಳಲ್ಲಿ ಕಾರ್ಯ ಆರಂಭವಾಗಲಿದೆ. ಸಭಾ

ಮಂಟಪ ಮಧ್ಯದಲ್ಲಿ ಇರಿಸಿರುವ ಮೇಲೆ ತಿರುಗುತ್ತಿರುವ ಮತ್ಸ್ಯಯಂತ್ರವನ್ನು ಅದರ ಕೆಳಭಾಗದಲ್ಲಿರುವ ತೈಲದ ಪಾತ್ರೆಯ ಮೇಲೆ ತಿರುಗತ್ತಿರುವ ಮತ್ಸ್ಯದ ಛಾಯೆಯನ್ನು ನೋಡಿ ಅದರ ಕಣ್ಣಿಗೆ ಅಲ್ಲೇ ಇಟ್ಟಿ ಧನಸ್ಸುನಲ್ಲಿ ಬಾಣವನ್ನಿಟ್ಟು ಹೊಡೆದು ಬೀಳಿಸಿದವರನ್ನು ನಮ್ಮ ರಾಜರ ಮಗಳಾದ ದ್ರೌಪತಿದೇವಿ ಅವರಿಗೆ ತನ್ನಕೈಯಲ್ಲಿದ್ದ ವರ ಮಾಲೆ ಹಾಕಿ ಅವರ ಕೈ ಹಿಡಿಯುವಳು. ನಿಮ್ಮಲ್ಲಿ ಒಬ್ಬಬ್ಬರಾಗಿ ಬಂದು ಮತ್ಸ್ಯವನ್ನು ಭೇದಿಸಲು ಇನ್ನು ಪ್ರಾರಂಭಮಾಡಬಹುದು ಎಂದು ಘೋಷಿಸಿದರು.

ಮಂತ್ರಿಗಳು ಹೇಳಿದಂತೆ ಸಭೆಯಲ್ಲಿದ್ದ ರಾಜಕುಮಾರರು ಒಬ್ಬೊಬ್ಬರಾಗಿ ಬಂದು ಪ್ರಯತ್ನ ಮಾಡಿ ವಿಫಲರಾಗಿ ತೆರಳುತ್ತಿದ್ದರು. ಇನ್ನು ಕೆಲವರು ಧನಸ್ಸನ್ನೇ ಎತ್ತಲಾರದೆ ಹೋದರು. ಮತ್ತು ಕೆಲವರು ಧನುಸ್ಸನ್ನೇ ತಮ್ಮ ಮೇಲೆ ಹಾಕಿಕೊಂಡು ಬಿದ್ದು ಎದ್ದು ಹೋಗುತ್ತಿದ್ದರು. ಎಲ್ಲಾ ಕ್ಷತ್ರಿಯರಾಜರ ಪಾಳಿ ಮುಗಿಯಿತು. ವಿಪ್ರರ ಸಾಲಿನಲ್ಲಿದ್ದ ಪಾಂಡವರಲ್ಲಿ ಅಗ್ರಜನಾದ ಧರ್ಮರಾಯನು ಅರ್ಜುನನಿಗೆ ಮತ್ಸ್ಯಯಂತ್ರವನ್ನು ಭೇದಿಸಲು ಹೋಗೆಂದು ಸೂಚಿಸಿದನು.

ಅಣ್ಣನ ಅಪ್ಪಣೆಯಂತೆ ಅರ್ಜುನನು ಅಣ್ಣಂದಿರಾದ ಧರ್ಮರಾಜನಿಗೆ ಮತ್ತು ಭೀಮಸೇನನಿಗೆ ವಂದಿಸಿ ಮೇಲಕ್ಕೆದ್ದು ನಾಲ್ಕು ಕಡೆ ವೀಕ್ಷಿಸಿ ನೋಡಲು, ಸ್ವಲ್ಪ. ದೂರದಲ್ಲಿ ಶ್ರೀ ಕೃಷ್ಣನು ಕಾಣಿಸಿ ಅರ್ಜುನನ್ನು ನೋಡಿದನು. ಅರ್ಜುನ ಪರಮಾತ್ಮನಾದ ಹರಿಗೆ ದೂರದಿಂದಲೇ ವಂದಿಸಿದನು. ಶ್ರೀ ಕೃಷ್ಣ ತನ್ನ ನೇತ್ರಗಳಿಂದಲೇ ಅರ್ಜುನನ್ನು ಆಶೀರ್ವದಿಸಿ ಅಪ್ಪಣೆ ಕೊಟ್ಟನು. ಜನರ ಮಧ್ಯದಿಂದ ಎದ್ದು ಬಂದ ಅರ್ಜುನನು ಅಲ್ಲಿ ಇಟ್ಟಿರುವ ಬಿಲ್ಲು ಬಾಣಗಳನ್ನು, ಮೇಲೆ ತಿರುಗುತ್ತಿರುವ ಮತ್ಸ್ಯವನ್ನು ನೋಡಿ, ಸಭಾ ಮಂಟಪದಲ್ಲಿದ್ದ ಎಲ್ಲರಿಗೂ ನಮಸ್ಕರಿಸಿದನು. ಮತ್ತು ಧನುರ್ಬಾಣಗಳಿಗೆ ವಂದಿಸಿ ಎಡಕೈಯಿಂದ ಧನುಸ್ಸನೆತ್ತಿ ಬಲಗೈಯಿಂದ ಛಾಪವನ್ನು ಸಂಧಿಸುವ ಮೊದಲು ಧನುವಿನ ನಾರಿಯನ್ನೆಳೆದು ಬಿಟ್ಟನು. ಆ ಝೇಂಕಾರ ಶಬ್ಧ ಸಭಿಕರನ್ನೆಲ್ಲ ಚಕಿತರನ್ನಾಗಿ ಮಾಡಿತು. ಎಲ್ಲರ ದೃಷ್ಟಿ ಅರ್ಜುನನ ಕಡೆ ಇತ್ತು. ಆ ಮೇಲೆ ಚಾಪವನ್ನು ಸಂಧಿಸಿ ತೈಲದ ಪಾತ್ರೆಯಲ್ಲಿ ಮೇಲಿದ್ದ ಮತ್ಸ್ಯವನ್ನು ವೀಕ್ಷಿಸುತ್ತ ಶರವನ್ನು ಬಿಟ್ಟನು, ಒಂದೇ ಹೊಡತಕ್ಕೆ ಮೀನಿನ ಕಣ್ಣಿನಲ್ಲಿ ಬಾಣ ಸಿಕ್ಕು ಬಿಟ್ಟು ತಿರುಗುವದು ನಿಂತು ಹೋಯಿತು. ಎಲ್ಲಾ ಸಭಿಕರು ಆ ದೃಶ್ಯ ಕಂಡು ಕರತಾಡನೆ ದಿಗಂತವನ್ನು ಮುಟ್ಟುವಂತೆ ಮಾಡಿದರು. ದೃಪದ ರಾಜನು ದ್ರೌಪತಿಯನ್ನು ಅರ್ಜುನನ ಬಳಿ ಕರೆತಂದನು. ದ್ರೌಪತಿ ದೇವಿ ಪಾರ್ಥನ ಕಂಠಕ್ಕೆ ವರಮಾಲೆ ಹಾಕಿ ಧನುಂಜಯಗೆ ನಮಸ್ಕರಿಸಿದಳು. ಆ ಮೇಲೆ ಅತಿ ವೈಭವದಿಂದ ವಿವಾಹ ನಡೆಯಿತು. ಆದರೆ ದೃಪದನಿಗೆ ತನ್ನ ಮಗಳನ್ನು " ಒಬ್ಬ ಬ್ರಾಹ್ಮಣನಿಗೆ ಕೊಡಬೇಕಾಯಿತಲ್ಲಾ" ಎಂಬ ಕೊರಗು ಮಾತ್ರ ವುಳಿದಿತ್ತು. ಸ್ವಲ್ಪ ಹೊತ್ತಿನ ಮೇಲೆ ಅವರು ಹಸ್ತಿನಾವತಿಯ ಪಾಂಡುರಾಜನ ಮಕ್ಕಳು ಪಾಂಡವರೆಂದು ತಿಳಿಯಿತು. ರಾಜನು ಆ ವಾರ್ತೆ ಕೇಳಿ ಸಂತಸ ಪಟ್ಟನು. ಪಾಂಡವರು ಎರಡು ದಿನ ಪಾಂಚಾಲದಲ್ಲಿ ಇದ್ದು ತರುವಾಯ ತಾಯಿಯ ಹತ್ತಿರಕ್ಕೆ ಬಂದರು. ಅಲ್ಲಿ ತಾಯಿಯ ಅಪ್ಪಣೆಯಂತೆ ಆಯಿದು ಜನ ಪಾಂಡವರು ದ್ರೌಪತಿಗೆ ಪತಿಗಳಾದರು.

ತಾವು ವಾಸವಾಗಿದ್ದ ಗ್ರಾಮ ಪ್ರಜೆಗಳಿಂದ ಅಪ್ಪಣೆ ಪಡೆದು ಕುಂತಿದೇವಿ, ದ್ರೌಪತಿ ಸಮೇತರಾಗಿ ಪಾಂಡವರು ಇಂದ್ರಪ್ರಸ್ತಪುರಕ್ಕೆ ಬಂದರು. ಇಂದ್ರಪ್ರಸ್ತದ ಪ್ರಜೆಗಳು ಪಾಂಡವರು ಸಜೀವರಾಗಿ ಬಂದದ್ದಕ್ಕೆ ಬಲು ಸಂತೋಷದಿಂದ ಅವರನ್ನು ಬರಮಾಡಿಕೊಂಡು, ಅವರಿಗೆ ಬೇಕಾದ ಸಹಕಾರವನ್ನಿತ್ತರು. ಪಾಂಡವರು ತಮ್ಮ ಬಾಹುಬಲದಿಂದ ಒಂದು ಸುಂದರವಾದ ಅರಮನೆ ಶ್ರೀಕೃಷ್ಣನ ಆಜ್ಞೆಯಂತೆ ದೇವಲೋಕದ ಶಿಲ್ಪಿಯನ್ನು ಕರೆಯಿಸಿ ಚಿತ್ರ ವಿಚಿತ್ರವಾದ ಅಲಂಕಾರವು ಮಾಡಿದ ಭವ್ಯವಾದ ಗೃಹ ನಿರ್ಮಾಣವಾಯಿತು. ಆ ಮನೆಯ ಗೃಹ ಪ್ರವೇಶದ ಕಾರ್ಯವನ್ನು ಅತಿ ವೈಭವದಿಂದ ನೆರವೇರಿಸಲು ಪಾಂಡವರು ಧೃತರಾಷ್ಟ್ರನನ್ನು ಮತ್ತು ಪರಿವಾರವನ್ನು ಅವರಿಗೆ ಸ್ವತಃ ಹೋಗಿ ನಿಮಂತ್ರಣ ಕೊಟ್ಟು ಬಂದರು. ಎಲ್ಲಾ ಬಂಧು ವರ್ಗದವರು ಬಂದರು. ದುರ್ಯೋಧನನು ಮನದಲ್ಲಿ "ಸತ್ತ ಪಾಂಡವರು ಬದುಕಿ ಬಂದರಲ್ಲಾ! ಅದರಲ್ಲಿ ಮದುವೆ ಮಾಡಿ ಕೊಂಡು ಬಂದು ನೂತನವಾದ ರಾಜಭವನವನ್ನೆ ನಿರ್ಮಿಸಿ ನಮ್ಮನ್ನು ತಮ್ಮ ಅರಮನೆ ನೋಡಲು ಕರೆಯ ಬಂದರಲ್ಲಾ" ಎಂಬ ಕೊರಗು ಅವನನ್ನು ಒಂದು ಕಡೆ ಬಾಧಿಸುತ್ತಿತ್ತು ಆದರೂ ಸೋದರಮಾವನ ಸಹಿತ ತಮ್ಮಂದಿರ ಸಂಗಡ ಇಂದ್ರಪ್ರಸ್ತಕ್ಕೆ ಬಂದನು. ಭವನವನ್ನು ವೀಕ್ಷಿಸಿ ತಮ್ಮಲ್ಲಿ ತಾವು 'ಅರಮನೆ ಇಂದ್ರ ವೈಭವ ಸಮೇತವಾಗಿದೆ. ಎಂದು ಕೊಳ್ಳುತ್ತ ಮನೆಯೊಳಗೆ ಹೋಗುತ್ತ ಒಂದು ಕಡೆ ನೆಲದ ಮೇಲೆ ನೀರು ಹರಿದು ಹೋಗುತ್ತಿರುವಂತೆ ಕಾಣಲು ದುರ್ಯೋಧನ ತನ್ನ ಪಂಚೆಯನ್ನು ಮೇಲಕ್ಕೆ ಎತ್ತಿ ಹಿಡಿದು ಮುಂದಕ್ಕೆ ಹೋದನು. ಆದರೆ ಅಲ್ಲಿ ನೀರಿರಲಿಲ್ಲ. ಅದೆಲ್ಲ ದೇವ ಶಿಲ್ಪಿಯ ಚಮತ್ಕಾರವಾಗಿತ್ತು ಮತ್ತು ಮುಂದೆ ಸಮತಲ ಪ್ರದೇಶದಂತೆ ತೋರುತ್ತಿರಲು ಅಲ್ಲಿ ನಿಜವಾಗಿ ನೀರು ಹರಿಯುತ್ತಿದ್ದ ಕಾಲುವೆ ಇತ್ತು. ದುರ್ಯೋಧನನು ಯಥಾರ್ಥವಾಗಿ ಮುಂದೆ ನಡೆದು ನೀರಿನಲ್ಲಿ ಬಿದ್ದೆ ಬಿಟ್ಟನು ಆ ಸಮಯಕ್ಕೆ ಸರಿಯಾಗಿ ದ್ರೌಪತಿ ದೇವಿ ಮೇಲಿನ ಉಪ್ಪರಿಗೆಯಲ್ಲಿ ಇವರನ್ನು ನೋಡುತ್ತಿದ್ದಂತೆ ದುರ್ಯೋಧನನು ಬಿದ್ದದ್ದು ಕಂಡು ನಕ್ಕು ಬಿಟ್ಟಳು. ಅದು ಕಂಡ ದುರ್ಯೋಧನನಿಗೆ ಮತ್ತಷ್ಟು ವ್ಯಸನವಾಯಿತು ಕಾರ್ಯಕ್ರಮ ಮುಗಿದು ಭೋಜನ ಆಗುತ್ತಲೇ ಮಾವ ತಮ್ಮಂದಿರೊಡನೆ ಹಸ್ತಿನಾವತಿಗೆ ದುರ್ಯೋಧನನು ಹೊರಟು ಬಿಟ್ಟನು.

ಹಸ್ತಿನಾವತಿಯಲ್ಲಿ ದುರ್ಯೋಧನನಿಗೆ ಪಾಂಡವರು ಸುಖಸಂತೋಷಗಳಿಂದ ಇರುವ ವರ್ತಮಾನ ದಿನ ದಿನಕ್ಕೆ ಹೆಚ್ಚಿಗೆ ತಿಳಿಯಹತ್ತಿತ್ತು. ಶಕುನಿಯನ್ನು ಒಂದು ದಿನ ತನ್ನ ಹತ್ತಿರಕ್ಕೆ ದುರ್ಯೋಧನನು ಬರಮಾಡಿಕೊಂಡು "ಮಾವಾ ಪಾಂಡವರು ಜೀವಂತವಾಗಿ ಇಂದ್ರಪ್ರಸ್ತಕ್ಕೆ ಬಂದು, ಕೋಟೆ ನಿರ್ಮಾಣಮಾಡಿ ಹೆಂಡತಿ, ತಾಯಿಯೊಡನೆ ಸುಖವಾಗಿ ಇರುವರು. ಆದರೆ, ಮಯನಿರ್ಮಿತ ಭವನದಲ್ಲಿ ನನಗೆ ದ್ರೌಪತಿ ಮಾಡಿದ ಅವಮಾನ ಹೇಳಲು ಅಸಾಧ್ಯವಾದದ್ದು. ಅದಕ್ಕೆ ತಕ್ಕಂತೆ ಪಾಂಡವರಿಗೆಲ್ಲರಿಗೂ ತಕ್ಕ ಶಿಕ್ಷೆಯಾಗಬೇಕು. ಇನ್ನು ನಾನು ಆ ವ್ಯಥೆಯನ್ನು ಸಹಿಸಲಾರೆ. ಏನಾದರೂ ಆಲೋಚನೆ ಮಾಡಿ ಮುಂದಿನ ಯೋಚನೆ ಹೇಳಬೇಕು". ಎಂದು ನುಡಿದನು.

ಶಕುನಿಗೆ ಪ್ರತ್ಯೇಕವಾಗಿ ಯೋಚಿಸುವ ಕಾರಣವೇ ಇಲ್ಲ. ಆತನ ಜನ್ಮವೇ ದುಷ್ಟ ಯೋಜನೆಗಳಿಂದ ಕೂಡಿದ್ದು. ಹಿಂದಲ್ಲೆ," ದುರ್ಯೋಧನಾ! ನಾಳೆ ಇಂದ್ರಪ್ರಸ್ತಕ್ಕೆ ದೂತನನ್ನು

ಕಳಿಸಿ ಜೂಜಾಟಕ್ಕಾಗಿ ಪಾಂಡವರನ್ನು ಕರಿಸಿ ಬಿಡು. ಜೂಜು ರಾಜರಿಗೆ ಭೂಷಣ, ಅದರಲ್ಲಿ ನನ್ನ ಕುಯುಕ್ತಿಯಿಂದ ಸೋಲಿಸಿ ಅವರನ್ನು ಅರಣ್ಯದ ಪಾಲು ಮಾಡೋಣ. ತಡ ವೇತಕ್ಕೆ ಶುಭಸ್ಯ ಶೀಘ್ರಂ" ವೆಂದು ತನ್ನ ಸಮಯೋಚಿತ ಅಭಿಪ್ರಾಯ ತಿಳಿಸಿದನು. ಮಾವನ ದೂರದೃಷ್ಟಿಗೆ ಮೆಚ್ಚಿ ದುರ್ಯೋಧನನು ಮರುದಿನವೆ ದೂತನನ್ನು ಕಳಿಸಿದನು.

ಕೌರವರು ಕಳಿಸಿದ ಆಮಂತ್ರಣವನ್ನು ಸ್ವೀಕರಿಸಿ ಧರ್ಮರಾಯನು ದ್ರೌಪತಿ ಸಮೇತರಾಗಿ ಹಸ್ತಿನಾವತಿಗೆ ಬಂದರು. ದೊಡ್ಡಪ್ಪನಿಗೆ ನಮಸ್ಕರಿಸಿ ಯೋಗ ಕ್ಷೇಮವನ್ನು ವಿಚಾರಿಸಿದರು. ಆದೇ ಸಭಾಮಂಟಪದಲ್ಲಿ ಏರ್ಪಡಿಸಿದ ಜೂಜಾಂಗಣದಲ್ಲಿ ಒಂದು ಕಡೆ ದುರ್ಯೋಧನಾದಿಗಳು ಶಕುನಿ ಸಮೇತರಾಗಿ ಆಶೀನರಾಗಿ, ದುರ್ಯೋಧನ ಪಾಂಡವರನ್ನು ಆಟಕ್ಕೆ ಆಹ್ವಾನಿಸಿದನು. ಇನ್ನೊಂದು ಕಡೆ ಪಾಂಡವರೈವರು ಕುಳಿತರು. ಜೂಜು ಪ್ರಾರಂಭವಾಯಿತು. ನಾನಾ ವಿಧದ ಮೋಸಗಳಿಂದ ಆಟ ನಡೆಯಿತು ಪಾಂಡವರು ಸರ್ವಸ್ವವನ್ನೆಲ್ಲ ಕಳೆದುಕೊಂಡರು. ಕಡೆಯಲ್ಲಿ ದ್ರೌಪತಿಯನ್ನು ಸಹ ಜೂಜಾಟದಲ್ಲಿ ಸೋತು ಬಿಟ್ಟರು. ಅರಮನೆಯಲ್ಲಿದ್ದ ದ್ರೌಪತಿಯನ್ನು ದುರ್ಯ್ಯೋದನನು ದುಶ್ಯಾಸನಿಗೆ ಹಿಡಿದು ತರಲು ಆಜ್ಞಾಪಿಸಿದನು. ಅಣ್ಣನ ಆಜ್ಞೆಯಂತೆ ದುಶ್ಯಾಸನನು ದ್ರೌಪತಿಯ ತಲೆ ಕೂದಲು ಹಿಡಿದು ಕೊಂಡು ಸಭಾ ಮಂಟಪಕ್ಕೆ ಎಳೆದು ತಂದನು. ದುರ್ಯೋಧನನು "ದಾಸಿಯಾದವಳು ತನ್ನ ತೋಡೆಯ ಮೇಲೆ ಕೂಡೆಂದು" ನುಡಿದನು. ಭೀಮನು ಆಕ್ರೋಶದಿಂದ "ದುರ್ಯ್ಯೋಧನಾ ದ್ರೌಪತಿಯನ್ನು ಯಾವ ತೋಡೆಯನ್ನು ತೋರಿಸಿ ಕೂಡೆಂದೆಯೋ! ಆ ತೋಡೆಯನ್ನು ಮುರಿದು ಬಿಡುವೆನು. ಮತ್ತು ದುಶ್ಯಾಸನನು ಅವಳ ಕೂದಲುಗಳನ್ನು ಹಿಡಿದು ಎಳೆದು ತಂದೆನೋ ಅವನ ಹೊಟ್ಟೆಯನ್ನು ಸೀಳಿ, ಆ ರಕ್ತದಿಂದ ದ್ರೌಪತಿಯ ಕೂದಲಿಗೆ ಹಚ್ಚಿದ ಮೇಲೆಯೆ ಅವಳು ತನ್ನ ಶಿರೋಜವನ್ನು ಕಟ್ಟಿಕೊಳ್ಳುವಳು ಎಂದು ನುಡಿದನು. ದ್ರೌಪತಿಯನ್ನು ಈ ಸಭೆಯಲ್ಲಿ ವಿವಸ್ತ್ರಳನ್ನಾಗಿ ಮಾಡೆಂದು ದುಶ್ಯಾಸನಿಗೆ ದುರ್ಯ್ಯೋಧನನು ನುಡಿದನು. ಆ ಕ್ಷಣದಲ್ಲಿ ದ್ರೌಪತಿ ಅಲ್ಲಿ ಕುಳಿತಿದ್ದ, ಧೃತರಾಷ್ಟ್ರ, ಭೀಷ್ಮ ದ್ರೋಣ, ಕೃಪಾಚಾರ್ಯ, ಅಶ್ವತ್ಥಾಮಾದಿ ಹಿರಿಯರಿಗೆ ಈ ಸಭೆಯಲ್ಲಿ ನಡೆಸುತ್ತಿರುವ ದುರ್ಮಾರ್ಗತ್ವ ತಡೆಯಲು ಬಹು ವಿಧದಿಂದ ಬೇಡಿಕೊಂಡಳು. ಯಾರು ಮಾತನಾಡಲಿಲ್ಲ. ಅಣ್ಣನ ಅಪ್ಪಣೆಯಂತೆ ಬಲವಂತದಿಂದ ದ್ರೌಪದಿಯ ಸೀರೆಯನ್ನೆಳೆಯ ಹತ್ತಿದನು. ಆಗ ದ್ರೌಪತಿ ಶ್ರೀ ಕೃಷ್ಣನನ್ನು ಬಹು ವಿಧದಿಂದ ಪ್ರಾರ್ಥಿಸಿದಳು.

ಜಗತ್ತನ್ನು ರಕ್ಷಿಸುವ ದಯಾಮಯನಾದ ಶ್ರೀ ಕೃಷ್ಣನು ವಸ್ತ್ರರೂಪದಿಂದ ದ್ರೌಪತಿಯ ಮಾನ ರಕ್ಷಣೆ ಮಾಡಿದನು. ಸೀರೆಗಳನ್ನು ಸೆಳೆಯುತ್ತಿದ್ದ ದುಶ್ಯಾಸನನ ಕೈಗಳು ಸೋತು ನೆಲಕ್ಕೆ ಬಿದ್ದನು. ಇಷ್ಟೆಲ್ಲಾ ಆದ ನಂತರ ಪಾಂಡವರು ಹನ್ನೆರಡು ವರ್ಷ ವನವಾಸ ಒಂದು ವರ್ಷ ಅಜ್ಞಾತವಾಸ ಮಾಡಬೇಕು. ಅಜ್ಞಾತವಾಸದಲ್ಲಿರುವಾಗ ಪಾಂಡವರ ಸುಳಿವು ಗೋತ್ತಾದರೆ ಪುನಃ ಹನ್ನೆರಡುವ ವರ್ಷ ವನವಾಸ ಒಂದು ವರ್ಷ ಅಜ್ಞಾತವಾಸ ಮಾಡಬೇಕೆಂದು ಹಿರಿಯರು ನಿರ್ಧಾರ ಮಾಡಿ ಪಾಂಡವರನ್ನು ಅರಣ್ಯಕ್ಕೆ ಕಳುಹಿಸಿದರು. ದ್ರೌಪತಿ ಪಾಂಡವರ ಹಿಂದೆ ಇದ್ದಳು. ಕುಂತಿ ದೇವಿ ವಿದುರನ ಮನೆಯಲ್ಲಿ ವಾಸಮಾಡಿದಳು.

ಪಾಂಡವರು ಅರಣ್ಯಕ್ಕೆ ತೆರಳಿದಾಗ, ಅವರ ಮೇಲೆ ಅಭಿಮಾನ, ಭಕ್ತಿ ಯುಳ್ಳವರಾದ ಬ್ರಾಹ್ಮಣೋತ್ತಮರು, ಮತ್ತು ಇತರರು ಅವರ ಹಿಂದೆ ತಮ್ಮ ಪ್ರಯಾಣ ಬೆಳಸಿದರು. ಅವರು ಎಷ್ಟು ಜನವೆಂದರೆ ! 57,66,000 ಬ್ರಾಹ್ಮಣರು, ಅವರ ಪತ್ನಿಯರು, ಮತ್ತು ಇಷ್ಟು ಜನಕ್ಕೆ ಶುಶ್ರೂಷ ಮಾಡಲು ಬಂದ ಸೇವಕರು, ಅವರ ಪತ್ನಿಯರು, ಮಕ್ಕಳು ಇದ್ದರು. ಪ್ರತಿನಿತ್ಯ ಇಷ್ಟು ಪರಿವಾರಕ್ಕೆ ವೇಳಗೆ ಸರಿಯಾಗಿ ಭೋಜನಾದಿಗಳು ನಡೆಯುತ್ತಿದ್ದವು. ಪಾಂಡವರು ಪ್ರತಿಯೊಬ್ಬರಿಗೂ ಬೇರೆ ಬೇರೆ ಕುಟೀರಗಳನ್ನು ನಿರ್ಮಿಸಿಕೊಂಡಿದ್ದರು. ದ್ರೌಪತಿ ದೇವಿ ಅಂದು ಯಾರ ಕುಟೀರದಲ್ಲಿರುವಳೋ ಆ ದಿನ ಮಿಕ್ಕಾದ ಸೋದರರು ಆ ಕುಟೀರದ ಮುಂದೆ ಹಾದು ಮುಂದಿನ ಹೋಗಬಾರದು ಎಂದು ಒಂದು ನೇಮಾ ಮಾಡಿ ಕೊಂಡಿದ್ದರು, ಹಾಗೆ ಹೋದಲ್ಲಿ ಒಂದು ವರ್ಷ ತೀರ್ಥ ಕ್ಷೇತ್ರ ಯಾತ್ರೆ ಮಾಡಬೇಕು. ಒಂದು ದಿನ ಒಬ್ಬ ವಿಪ್ರನು " ನನ್ನ ಮಗ ವಿಪತ್ತಿನಲ್ಲಿರುವನು ಯಾರಾದರು ಬಂದು ಕಾಪಾಡಿರಿ" ಎಂದು ಅರ್ಜುನನ್ನು ಬೇಡಿಕೊಂಡನು, ತಕ್ಷಣವೇ ಅಲೋಚಿಸದೆ ಬಾಲಕನ ರಕ್ಷಣೆಗಾಗಿ ಅಗ್ರಜನ ಕುಟಿರದ ಮುಂದಿನಿಂದ ತನ್ನ ಧನುರ್ಬಾಣಗಳನ್ನು ತರಲು ಆಯುಧಗಳಿಟ್ಟ ಕುಟಿರಕ್ಕೆ ಧಾವಿಸಿ ಹೋಗಿ ಧನಸ್ಸು ಮತ್ತು ತೂಣೀರವನ್ನು ತೆಗೆದು ಕೊಂಡು ಬಂದು ಬ್ರಾಹ್ಮಣನ ಹಿಂದೆ ಹೋಗಿ ಬಾಲಕನನ್ನು ರಕ್ಷಿಸಿ ಬಾಲಕನನ್ನು ಬ್ರಾಹ್ಮಣನಿಗೆ ಒಪ್ಪಿಸಿ ತಿರಿಗಿ ತಮ್ಮ ಕುಟೀರಕ್ಕ ಬರುತ್ತಿರಲು ತಾನು ಆಗ ಮಾಡಿದ ಅಪರಾಧ ತಕ್ಷಣ ಜ್ಞಾಪಕಕ್ಕೆ ಬಂದಿತು. "ಅಯ್ಯೋ, ಎಂಥಹ ಅಪಚಾರವಾಯಿತು. ಜ್ಞಾತ ಅಜ್ಞಾತದಿಂದ ಆದ ತಪ್ಪು ತಪ್ಪೆ! ಇದಕ್ಕಾಗಿ ಪ್ರಾಯಶ್ಚಿತ್ತವಾಗಬೇಕು" ಎಂದು ಧೃಡ ಸಂಕಲ್ಪ ಮಾಡಿದನು.

ಅಲ್ಲಿಯೇ ಕುಳಿತಿದ್ದ ಭೀಮಸೇನನ ಹತ್ತಿರಕ್ಕೆ ಹೋಗಿ "ಅಣ್ಣಾ! ನನ್ನಿಂದ ಈಗ ಒಂದು ಅಪಚಾರವಾಗಿದೆ. ಪ್ರಾಯಶ್ಚಿತ್ತ ಮಾಡಿ ಕೊಳ್ಳಲೇ ಬೇಕಾಗಿದೆ ". ಎಂದು ನಡೆದ ವಿಷಯ ತಿಳಿಸಿದನು. "ನೀನು ಮಾಡಿದ ಅಪಚಾರ ಅಂಥಃ ದೊಡ್ಡದೇನಲ್ಲ, ಒಬ್ಬ ಬ್ರಾಹ್ಮಣ ಬಾಲಕನ ರಕ್ಷಣೆಗಾಗಿ ಅವಸರಪಟ್ಟು ಹೋಗಿದ್ದು ಮಾತ್ರ ನಮ್ಮ ಧರ್ಮ, ಆ ಧರ್ಮನಿರ್ವಂಚನೆಯಿಂದ ಮಾಡಿರುವಿ. ಆದರೂ ಅಣ್ಣನನ್ನು ವಿಚಾರಿಸಿ ಮುಂದಿನ ಕ್ರಮ ತೆಗೆದು ಕೊಂಡರಾಯಿತು." ಎಂದು ಭೀಮಸೇನನು ನುಡಿದು ಅಣ್ಣನಾದ ಧರ್ಮತನಯನ ಬಳಿಗೆ ಇಬ್ಬರು ಹೋದರು. ಅದೇ ಆಗ ಧರ್ಮರಾಯನು ಕುಟೀರದಿಂದ ಹೊರಗೆ ಬರುತ್ತಿರಲು ಭೀಮಾರ್ಜುನರು ತನ್ನ ಕಡೆ ಬರುತ್ತಿರುವುದನ್ನು ಕಂಡು ನೋಡುತ್ತ ನಿಂತನು. ಭೀಮಾರ್ಜುನರು ಅಣ್ಣನಿಗೆ ನಮಿಸಿ ನಡೆದ ವಿಚಾರವನ್ನು ತಿಳಿಸಿದರು. ಆಗ ಧರ್ಮರಾಯನು "ಅರ್ಜುನ! ನೀನು ಬುದ್ಧಿ ಪೂರಕವಾಗಿ ಬಂದಿಲ್ಲ, ಒಬ್ಬ ಬ್ರಾಹ್ಮಣನ ಬಾಲಕನನ್ನು ರಕ್ಷಿಸಲು ಅವಸರದಿಂದ ಬಂದಿರುವೆ ಇದಕ್ಕಾಗಿ ಚಿಂತಿಸುವ ಕಾರಣವಿಲ್ಲ" ಎಂದನು ಆಗ ಪಾರ್ಥನು "ಅಣ್ಣಾ! ನೀವು ಅನ್ನುವದು ನಿಜ, ಆದರೆ ತಿಳಿದು ಮಾಡಿದರು, ತಿಳಿಯದೆ ಮಾಡಿದರು ತಪ್ಪು ತಪ್ಪೆ ಆಗುತ್ತದೆ. ಆದ ಕಾರಣ ನನ್ನ ವ್ರತಕ್ಕೆ ಭಂಗ ಬರಬಾರದು. ಆದ ಕಾರಣ ನನ್ನನ್ನು ಪ್ರಾಯಶ್ಚಿತ್ತ ಮಾಡಿಕೊಳ್ಳಲು ತೀರ್ಥ ಕ್ಷೇತ್ರಗಳಿಗೆ ಹೋಗಲು ದಯವಿಟ್ಟು ಅಪ್ಪಣೆ ಕೊಡಿ ಎಂದು

ಅತಿ ವಿನಯದಿಂದ ಪ್ರಾರ್ಥಿಸಿದನು. "ಭೀಮಸೇನಾ! ಅರ್ಜುನನಿಗೆ ಮನದಲ್ಲಿ ಸಮಾಧಾನವಿಲ್ಲ, ಆತನ ಇಷ್ಟದಂತೆ ಹೋಗಿಬರಲಿ" ಎಂದು ಧರ್ಮರಾಯನು ಅಪ್ಪಣೆ ಇತ್ತನು.

ಅರ್ಜುನನು ತನ್ನ ಪ್ರಯಾಣದ ಸಿದ್ಧತೆ ಮಾಡಿ ಕೊಂಡು ಅಣ್ಣಂದಿರಿಗೆ ನಮಸ್ಕರಿಸಿ ಹೊರಟನು. ತನ್ನ ಪ್ರಯಾಣದಲ್ಲಿ ಗ್ರಾಮ ನಗರಗಳನ್ನು ದಾಟುತ್ತಾ ಗಂಗಾ ತೀರ ಪ್ರಾಂತದಲ್ಲಿ ಸಂಜೆಯಾಗಲು ರಾತ್ರಿ ಅಲ್ಲೆ ದೊಡ್ಡದೊಂದು ವಟ ವೃಕ್ಷದ ಕೆಳಗೆ ವಿಶ್ರಮಿಸಿದನು. ಬೆಳಗಾಗುತ್ತಲೆ ಎದ್ದು ಪ್ರಾತಃ ಕರ್ಮಗಳನ್ನು ಮುಗಿಸಿ ಮುಂದಿನ ಪ್ರಯಾಣ ಬೆಳೆಸಬೇಕೆಂದು ನಿಶ್ಚಯಿಸಿ ಸ್ನಾನಕ್ಕಾಗಿ ಗಂಗಾನದಿಯಲ್ಲಿಳಿದು ಒಂದು ಮುಳುಗು ಹಾಕುತ್ತಲೆ ಪಾತಾಳ ರಾಜನಾದ ನಾಗರಾಜನ ಮಗಳು "ಉಲೂಪಿ"ಯೆಂಬ ಕನ್ಯಾ ಅಲ್ಲೆ ಸಂಚರಿಸುತ್ತ ಅರ್ಜುನನ್ನು ಕಂಡು ಮೋಹಿತಳಾಗಿ ನೀರಿನಲ್ಲಿ ಮುಳುಗಿದ್ದ ಅರ್ಜುನನ್ನು ಹಾಗೆಯೇ ಪಾತಾಳದಲ್ಲಿದ್ದ ತನ್ನ ಗೃಹಕ್ಕೆ ಕರೆದು ಕೊಂಡು ಹೋಗಿ ಸುಪ್ಪತ್ತಿಗೆಯ ತಲ್ಪದಲ್ಲಿ ಮಲಗಿಸಿದಳು. ಅವನು ಎಚ್ಚರವಿಲ್ಲದೆ ಮಲಗಿದ್ದನು. ಉಲುಪಿ ಅಲ್ಲಿಂದ ಮನೆಯೊಳಗೆ ಹೋಗುತ್ತಿರಲು ಉಲೂಪಿ ತಾಯಿಯ ಸೋದರನಾದ ತಕ್ಷಕನು ಅದೇ ಸಮಯಕ್ಕೆ ಅವಳಿಗೆ ಎದುರು ಬಂದು ಅವಳಿಗಾಗಿ ಪ್ರತಿನಿತ್ಯಾ ಅವಳ ಸೌಂದರ್ಯಕ್ಕೆ ಮರುಳಾಗಿ ಅವಳನ್ನು ತನ್ನವಳಾಗಿ ಮಾಡಿಕೊಳ್ಳ ಬೇಕೆಂದು ಹಂಬಲದಿಂದ ಸಂದರ್ಭಸಿಗದೆ ತವಕ ಪಡುತ್ತಿದ್ದನು. ಆ ದಿವಸ ಸಂದರ್ಂಭ ಒದಗಿ ಬಂದುದನ್ನು ವ್ಯರ್ಥ ಬಿಡಬಾರದೆಂದು, ಆಶೆಯಿಂದ ಅವಳನ್ನು ತಬ್ಬಿ ಕೊಳ್ಳಲು ಅವಸರದಿಂದ ಅವಳ ಕಡೆ ಅತಿ ವೇಗದಿಂದ ಧಾವಿಸಿದನು. ಉಲೂಪಿ ತಕ್ಷಣ ತನ್ನ ಕೈಗೆ ಸಿಕ್ಕದೆ ಪಕ್ಕಕ್ಕೆ ಸರಿದು ಹಿಂದಕ್ಕೆ ತಿರುಗಿ ಅರ್ಜುನನು ಮಲಗಿದ್ದ ತಲ್ಪದ ಕಡೆ ಚೀರುತ್ತ ಓಡಿ ಬಂದಳು, ಅದೇ ಸಮಯಕ್ಕೆ ಅರ್ಜುನನು ಎಚ್ಚೆತ್ತು ಏನು ಸದ್ದೆಂದು ಅತ್ತ ನೋಡಲು ಒಬ್ಬ ಅಬಲೆಯ ಹಿಂದೆ ಒಬ್ಬ ವಿಕೃತರೂಪವುಳ್ಳ ರಾಕ್ಷಸಾಕಾರವುಳ್ಳವ. ಪೀಡಿಸುತ್ತಾ ಧಾವಿಸಿ ಬರುವುದನ್ನು ಕಂಡು ತಕ್ಷಣ ಮಂಚದಿಂದ ಎದ್ದು ತಕ್ಷಕರನ್ನು ತಡೆಹಿಡಿದನು.

ಅವರಿಬ್ಬರಿಗೂ ಘೋರ ಸೆಣೆಸಾಟ ನಡೆದು, ಒಬ್ಬರಿಗೊಬ್ಬರು ಎತ್ತಿ ಒಗೆಯುತ್ತಿರಲು, ಅರ್ಜುನನು ಕೆಳಗೆ ಬಿದ್ದವನೆದ್ದು ತನ್ನ ನಡುವಿನಲ್ಲಿದ್ದ ಆಯುಧವನ್ನೆಳೆಧಿಡಿದು ತಕ್ಷಕನನ್ನು ಹತಮಾಡಲು ಕೈ ಮೇಲಕ್ಕೆತ್ತಿರಲು, ಅದೇ ಸಮಯಕ್ಕೆ ನಾಗರಾಜನು ಅಲ್ಲಿಗೆ ಬಂದು ತಡೆದು "ನಿಲ್ಲು ಅವನಿಂದ ಮುಂದೆ ಬಹಳ ಕೆಲಸವಿದೆ ಕೊಲ್ಲಬೇಡ " ವೆಂದು ಅರ್ಜುನನಿಗೆ ಗಂಭೀರ ಸ್ವರದಿಂದ ಹೇಳಿದನು.ನಾಗರಾಜಗೆ ಪಾರ್ಥನು ನಮಸ್ಕರಿಸಿ ಅವರ ಮಾತಿನಂತೆ ತಡೆದು ನಿಂತನು. ನಾಗರಾಜನು ತಕ್ಷಕನ ಕಡೆ ತಿರಿಗಿ "ನಾಚಿಕೆಯಿಲ್ಲ? ನೋಡುತ್ತನಿಂತಿರುವೆ. ಇನ್ನು ನಿನ್ನ ಪ್ರತಾಪ ಸಾಕು? ಹೊರಟು ಹೋಗೆಂದು" ಅವನನ್ನು ಕಳಿಸಲು ತಕ್ಷಕನು ಅರ್ಜುನನ್ನು ಕೆಟ್ಟ ದೃಷ್ಟಿಯಿಂದ ನೋಡುತ್ತ "ಇನ್ನು ನಿನ್ನನ್ನು ಬಿಡುವುದಿಲ್ಲ ಕಾದುಕೋ" ಎನ್ನುತ್ತ ಮುಂದೆ ಹೋದನು. ತಾವು ಯಾರು? ಇಲ್ಲಿಗೆ ಬಂದ ಕಾರಣವೇನೆಂದು? ನಾಗರಾಜನು ಪಾರ್ಥನನ್ನು ವಿಚಾರಿಸಲು "ನಾನು ಪಾಂಡವ ಮಧ್ಯಮನಾದ ಅರ್ಜುನನು, ನಾನು ಗಂಗಾ ನದಿಯಲ್ಲಿ ಸ್ನಾನ ಮಾಡುತ್ತಿದ್ದಂತೆ ಇಲ್ಲಿಗೆ

ಬಂದಿರುವೆನು. ಇಲ್ಲಿಗೆ ಹೇಗೆ ಬಂದೆನೋ ಒಂದು ಅರಿಯೆ. ಇದೇ ನನ್ನ ವೃತ್ತಾಂತ ಎಂದು ಅರ್ಜುನನು ನಾಗರಾಜನಿಗೆ ತನ್ನ ವೃತ್ತಾಂತ ತಿಳಿಸಿದನು. ಅಲ್ಲಿಯೇ ನಿಂತಿದ್ದ ಉಲೂಪಿ ತನ್ನ ತಂದೆಗೆ ತಾನು ಅವನನ್ನು ಪ್ರೇಮಿಸಿ ಇಲ್ಲಿಗೆ ಕರೆತಂದ ವಿಚಾರವನ್ನು ತಿಳಿಸಿ ಲಜ್ಜೆಯಿಂದ ತಲೆ ತಗ್ಗಿಸಿ ನಿಂತಳು. ಅವಳ ಇಂಗಿತವನ್ನರಿತು ನಾಗರಾಜನು ತನ್ನ ಮನದಲ್ಲಿ "ಒಳ್ಳೆ ಶೂರನನ್ನೆ ಆಯಿದು ಕೊಂಡ ಧೈರ್ಯಕ್ಕೆ ಮೆಚ್ಚಿ" ಮಗಳನ್ನು ಕಂಡು ಸಂತಸದಿಂದ ತನ್ನ ಮೆಚ್ಚುಗೆ ತಿಳಿಸಿದನು. ಅವರಿಬ್ಬರಿಗೆ ವಿವಾಹವಾಯಿತು. ಧನುಂಜಯನು ಕೆಲವು ದಿನ ನಾಗಲೋಕದಲ್ಲೆ ವಾಸಮಾಡಿ ಸುಖದಿಂದ ಇದ್ದು ಉಲೂಪಿ, ನಾಗರಾಜರ ಅಪ್ಪಣೆ ಪಡೆದು ಮುಂದಕ್ಕೆ ನಡೆದನು. ಎರಡನೆ ಸಂಘಟನೆಯಲ್ಲಿ ಚಿತ್ರಾಂಗದೆ ಎಂಬ ಕನ್ನಿಕೆಯನ್ನು ಮೋಹಿಸಿ ಮದುವೆಯಾದನು. ಅಲ್ಲಿಂದ ಕೆಲವು ದಿನಗಳು ಮಾರ್ಗವನ್ನು ನಡೆಯುತ್ತ ನಗರಗಳನ್ನು ದಾಟಿಹೋಗುತ್ತಿರಲು ದೂರದಲ್ಲಿ ಒಂದು ನಗರ ಕಾಣಿಸಿತು. ಸ್ವಲ್ಪ ಹೊತ್ತಿನಲ್ಲಿ ಆ ನಗರ ಪ್ರವೇಶಿಸಿದನು. ನಗರದ ಬೀದಿಗಳಲ್ಲಿ ಸಂಚರಿಸುತ್ತಿರಲು ನಗರದ ಮಧ್ಯದಲ್ಲಿ ಒಂದು ದೊಡ್ಡ ಆಲಯ ಕಾಣಿಸಿತು. ಅಲ್ಲಿಗೆ ಹೋಗಿ ಆಲಯದಲ್ಲಿ ಕುಳಿತು ಶ್ರೀ ಕೃಷ್ಣನನ್ನು ನೆನೆದು, ತನ್ನಲ್ಲಿ "ಸ್ವಾಮೀ! ನೀನೆ ನನ್ನ ಪಾಲಿನ ದೈವ, ಮಿತ್ರನು ಮತ್ತು ಆಪ್ತಬಂಧುವು ಮುಂದಿನ ದಾರಿ ನೀನೇ ತೋರಿಸಬೇಕು" ಎಂದು ಪ್ರಾರ್ಥಿಸುತ್ತ ಕುಳಿತಿರಲು, ಆಲಯದ ಮುಂದೆ ದಾರಿಯಲ್ಲಿ ಹೋಗುತ್ತಿರುವವರನ್ನು ತಡೆದು. "ಈ ನಗರದ ಹೆಸರೇನು? ಇಲ್ಲಿಯ ರಾಜನಾರು? ಎಂದು ವಿಚಾರಿಸಲು, ಅವರು, ಇದು ಮಥೂರಾ ನಗರ, ಇಲ್ಲಿಯ ಅರಸು ವಸುದೇವ ಮಹಾರಾಜರು. ದೇವಕಿದೇವಿ ಅವರ ಧರ್ಮ ಪತ್ನಿ. ಬಲರಾಮ, ಕೃಷ್ಣ ಮತ್ತು ಸುಭದ್ರೆ ಮೊದಲಾಗಿ ಮಕ್ಕಳಿರುವರು, ಬಲರಾಮನು ತನ್ನ ತಂಗಿಯಾದ ಸುಭದ್ರೆಯನ್ನು ಕುರುರಾಜನಾದ ದುರ್ಯೋಧನನಿಗೆ ಕೊಟ್ಟು ಮದುವೆ ಮಾಡಬೇಕೆಂದು ನಿಶ್ಚಯಿಸಿರುವನು ಎಂದು ಹೇಳಿ ಅವರು ಮುಂದಕ್ಕೆ ಹೊರಟು ಹೋದರು. ಅರ್ಜುನನು ಪುನಃ ಶ್ರೀ ಕೃಷ್ಣನನ್ನೇ ಧ್ಯಾನಿಸುತ್ತ ಕುಳಿತನು.

ಅಷ್ಟರಲ್ಲಿ ಇಬ್ಬರು ರಾಜ ಭಟರು ಆ ದೇವಾಲಯಕ್ಕೆ ಬಂದರು ಪ್ರತಿನಿತ್ಯ ಈ ಆಲಯಕ್ಕೆ ಯಾರಾದರು ಹೊಸಬರು ಬಂದರೆ ರಾಜನ ಅಪ್ಪಣೆಯಂತೆ ಭಟರು ಬಂದು ನೋಡಿ ಕೊಂಡು ಹೋಗಿ ರಾಜನಿಗೆ ತಿಳಿಸುವರು. ಅದರಂತೆ ಇಂದು ರಾಜ ಭಟರು ಬಂದು ನೋಡಿದಾಗ ಕಾವಿ ವಸ್ತ್ರದ, ಗಡ್ಡ ಮೀಸೆ ಬೆಳೆದ ಒಬ್ಬ ಸನ್ಯಾಸಿ, ಸಹ ತೇಜಸ್ವಿ ರೂಪವುಳ್ಳವನು ಕಂಡು ಬಂದನು. ಅವನನ್ನು ನೋಡಿ ನಮಸ್ಕರಿಸಿ ಭಟರು ರಾಜನಿಗೆ ವಾರ್ತೆ ಮುಟ್ಟಿಸಲು ಬೇಗ ರಾಜಭವನದ ಕಡೆ ನಡೆದರು. ಓಲಗದಲ್ಲಿನ ವಸುದೇವ ಮಹಾರಾಜನು ಶ್ರೀ ಕೃಷ್ಣ ಬಲರಾಮಾದಿ ಜನರು ಕುಳಿತಿದ್ದರು. ಎಂದಿನಂತೆ ಭಟರು ರಾಜನಿಗೆ ನಮಸ್ಕರಿಸಿ, ಪಟ್ಟಣ ಮಧ್ಯದಲ್ಲಿದ್ದ ಆಲಯಕ್ಕೆ ಒಬ್ಬ ಮಹಾನೀಯರಾದ ಸನ್ಯಾಸಿಗಳು ಬಂದ ವಿಚಾರವನ್ನು ತಿಳಿಸಿದರು. ಈ ವಾರ್ತೆಯನ್ನು ತಿಳಿದ ವಸುದೇವನು, ಬಲರಾಮ ಕೃಷ್ಣರ ಕಡೆ ನೋಡಿದನು ತಂದೆಯ ಇಂಗಿತವನ್ನರಿತ ಬಲರಾಮ

ಕೃಷ್ಣರು ಆಲಯಕ್ಕೆ ನಡೆದರು.

ಆಲಯದಲ್ಲಿದ್ದ ಸನ್ಯಾಸಿಯನ್ನು ಕಂಡು ಶ್ರೀ ಕೃಷ್ಣನು ಮುಗುಳ್ನಗೆಯಿಂದ ಅವನನ್ನು ಗುರುತಿಸಿ, ಆತನಿಗೆ, ಏನು ತಿಳಿಯದವನಂತೆ, "ಅಣ್ಣಾ ಇವರು ಹಿಮಾಲಯದಲ್ಲಿ ನೂರಾರುವರ್ಷ ತಪಗೈದು ಬಂದಂತೆ ಕಾಣಿಸುತ್ತದೆ. ಇವರ ಮುಖಮಂಡಲ ಎಂಥಾ ತೇಜಸ್ಸಿನಿಂದ ಪ್ರಕಾಶಿಸುತ್ತಿದೆ ನೋಡಿ! ನಾವು ಇವರನ್ನು ನಮ್ಮ ಭವನಕ್ಕೆ ಕರೆದು ಪಾದಪೂಜೆ ಮಾಡಬೇಕು. ಅವರ ತೇಜೋ ಪುಂಜವಾದ ಮುಖ, ದೇಹ ಹೇಗೆ ಪ್ರಕಾಶಿಸುತ್ತಿದೆ ನೋಡಿ" ಯೆಂದು ನುಡಿದು ಬಲರಾಮನನ್ನು ಅವರ ಹತ್ತಿರಕ್ಕೆ ಕರೆದೊಯ್ದು ಇಬ್ಬರು ನಮಸ್ಕರಿಸಿದರು. ಶ್ರೀಕೃಷ್ಣನನ್ನು ಕಂಡು ಅರ್ಜುನ ತನ್ನ ಪರಿಸ್ಥಿತಿಯನ್ನು ಹೇಳಲು ಯತ್ನಿಸಿದಾಗ ಶ್ರೀ ಕೃಷ್ಣನು ಅದನ್ನರಿತು ಕಣ್ಣಿನಿಂದ ಸುಮ್ಮನಿರಲು ಸೂಚಿಸಿದನು.

ಶ್ರೀಕೃಷ್ಣ ಬಲರಾಮರ ಹಿಂದೆ ರಥದಲ್ಲಿ ರಾಜ ಭವನಕ್ಕೆ ಅರ್ಜುನನು ಹೊರಟನು ಮಾರ್ಗ ಮಧ್ಯದಲ್ಲಿ ಅರ್ಜುನನಿಗೆ ಶ್ರೀ ಕೃಷ್ಣನು "ನೀನು ಹೆಚ್ಚಿಗೆ ಮಾತಾನಾಡ ಬೇಡ. ಸಂದರ್ಭಾನು ಸಾರ ತಲೆಯಾಡಿಸಿ ನೇತ್ರಗಳನ್ನು ಮುಚ್ಚಿ ತಿಳಿಸು" ಎಂದು ಎಚ್ಚರಿಕೆ ಮಾಡಿದನು. ರಾಜ ಭವನದ ಮುಂದೆ ಕೃಷ್ಣ ಬಲರಾಮರು ಸ್ವಾಮಿಯನ್ನು ಮರ್ಯಾದೆ ಪೂರ್ವಕವಾಗಿ ರಥದಿಂದಿಳಿಸಿ ರಾಜಮಂದಿರವನ್ನು ಪ್ರವೇಶಿಸಿದರು. ತನ್ನ ಮಕ್ಕಳ ಕೂಡ ಬಂದ ಯತೀಶ್ವರನಿಗೆ ವಸುದೇವನು ಸಿಂಹಾಸನದಿಂದಿಳಿದು ಬಂದು ನಮಸ್ಕರಿಸಿ ಯೋಗಕ್ಷೇಮವನ್ನು ವಿಚಾರಿಸಿ ಉಚಿತಾಸನದಲ್ಲಿ ಕೂಡಿಸಿದನು. ಓಲಗದಲ್ಲಿ ನಡೆಯುತ್ತಿದ್ದ ರಾಜಕಾರಣ ವಿಷಯಗಳನ್ನು ಕೇಳುತ್ತ ಅರ್ಜುನನು ಕೃಷ್ಣನ ಕಡೆಗೆ ದೈನ್ಯದೃಷ್ಟಿಯಿಂದ ನೋಡುತ್ತಲೆ, ಶ್ರೀಕೃಷ್ಣನು ಅವನ ಮನೋಗತವನ್ನರಿತು. ತಂದೆಯ ಅನುಜ್ಞೆ ಪಡೆದು ಸ್ವಾಮಿಗಳನ್ನು ಏಕಾಂತವಾಗಿದ್ದ ಭವನದ ಮೇಲುಪ್ಪರಿಗೆಗೆ ಕರೆದು ಕೊಂಡು ಹೋದನು. ಅಲ್ಲಿ ತಾವು ಉಭಯರೆ ಇದ್ದ ಕಾರಣ ಅರ್ಜುನನು ತಾನು ಮಾಡಿದ ಅಪರಾಧಗಾಗಿ ಪ್ರಾಯಶ್ಚಿತ್ತಾರ್ಥವಾಗಿ ತೀರ್ಥಯಾತ್ರಾರ್ಥವಾಗಿ ಹೊರಟ ವಿಷಯ ಮತ್ತು ಮಾರ್ಗ ಮಧ್ಯದಲ್ಲಿ ಪಾತಾಳ ಲೋಕಕ್ಕೆ ಹೋಗಿ ತಕ್ಷಕನಿಂದ ಸೆಣೆದು ಉಲೂಪಿ ಮತ್ತು ಚಿತ್ರಾಂಗದೆಯನ್ನು ಮದುವೆ ಮಾಡಿಕೊಂಡದ್ದು, ಎಲ್ಲಾ ವಿಷಯಗಳನ್ನು ಸವಿಸ್ತಾರವಾಗಿ ತಿಳಿಸಿದನು. ಅರ್ಜುನನಿಂದ ಎಲ್ಲ ವಿಷಯ ಕೇಳಿ," ನೀ ಇಲ್ಲಿಗೆ ಬಂದದ್ದು ಒಳ್ಳೇದೇ ಆಯಿತು. ಮುಂದೆ ಕೆಲವು ದಿನಗಳು ಹೀಗೆ ವೇಷಧಾರಿಯಾಗಿಯಿರಬೇಕು. ಇದು ಅನಿವಾರ್ಯ" ಎಂದು ಶ್ರೀ ಕೃಷ್ಣನು ತಿಳಿಸಿ, ಮುಂದೆ ಯಾವ ರೀತಿ ಅರ್ಜುನನ ವರ್ತನೆ ಇರುವದನ್ನು ತಿಳಿಸಿ ಬಿಟ್ಟನು. ಆದರಂತೆ ಅರ್ಜುನನು ಶ್ರೀಕೃಷ್ಣನ ಸೂಚನೆಯಂತೆ ನಡೆದುಕೊಳ್ಳುತ್ತ ಬಂದನು.

ಪ್ರತ್ಯೇಕವಾದ ಪೂಜಾ ಗೃಹ ಏರ್ಪಾಟು ಮಾಡಿ, ಅಲ್ಲಿ ಎಲ್ಲಾ ವಿಧದ ಸೌಕರ್ಯಗಳನ್ನು ಮಾಡಿದನು. ಪೂಜಕ್ಕೆ ಬೇಕಾದ ಪರಿಮಳ ದ್ರವ್ಯಗಳನ್ನು ಒದಗಿಸಿ ತಂದಿಡಲು ಪ್ರತ್ಯೇಕವಾಗಿ ತನ್ನ ತಂಗಿಯಾದ ಸುಭದ್ರೆಯನ್ನು ನಿಯಮಿಸಿ ತನ್ನ ತಂದೆ ತಾಯಿಗೆ ತಿಳಿಸಿದನು. ಪ್ರತಿದಿನ ಪೂಜೆಯ

ವೇಳೆಗೆ ಸುಭದ್ರೆ ಪುಷ್ಪಗಳನ್ನು ತಂದು ಅಣಿ ಮಾಡಿಯಿಡುತ್ತಿದ್ದಳು. ಪೂಜಾ ಕಾರ್ಯ ಪ್ರಾರಂಭವಾಗುತ್ತಲೇ ರಾಜನಾದ ವಸುದೇವ ದೇವಕಿ ಪೂಜಾಗೃಹಕ್ಕೆ ಬಂದು ಪೂಜೆಯನ್ನು ನೋಡಿ ತೀರ್ಥ ಪ್ರಸಾದ ತೆಗೆದು ಕೊಂಡು ಹೋದನಂತರ ಶ್ರೀ ಕೃಷ್ಣ ಬಲರಾಮರು ಬಂದು ಪ್ರಸಾದ ಕೊಂಡು ಹೋಗುತ್ತಿದ್ದರು. ಹೀಗೆ ಕೆಲವು ದಿನಗಳು ಕಳೆದವು. ಶ್ರೀ ಕೃಷ್ಣನು ಅರ್ಜುನನ ಪೂಜಾ ಗೃಹಕ್ಕೆ ಬಂದು, ಸುಭದ್ರ ಅರ್ಜುನರು ಯಾರು ಇರದ ಸಮಯದಲ್ಲಿ ಅವರನ್ನು ಗಮನಿಸುತ್ತ ಮರೆಯಲ್ಲಿ ನೋಡುತ್ತನಿಂತನು. ಕಪಟ ಸನ್ಯಾಸಿ ಅರ್ಜುನನು ಸುಭದ್ರೆಯ ರೂಪ ಲಾವಣ್ಯಕ್ಕೆ ಮರುಳಾಗಿ ಸಮಯವನ್ನು ಕಾದಿದ್ದನು. ಅಂದು ಅವಳ ಕೂಡ ಮಾತಾಡುವದಕ್ಕೆ ಸಂದರ್ಭ ಕೂಡಿಬಂದಿತು. ಸುಭದ್ರೆಯು ಪುಷ್ಪಗಳನ್ನು ಅಂದವಾಗಿ ಹೆಣೆದು ತಂದು ಪೂಜೆಗಾಗಿ ಅಲ್ಲಿ ತಂದಿಟ್ಟಳು. " ಸುಭದ್ರೆ! ನೀನು ಮಾಡುತ್ತಿರುವ ಸೇವೆ ಅಮೋಘವಾದದ್ದು ನಿನ್ನ ಕೋರಿಕೆ ಏನು!? ನಾವು ಈ ಕ್ಷಣದಲ್ಲಿ ನೆರವೇರಿಸುತ್ತೇವೆ. ಬಾ ಹತ್ತಿರಕ್ಕೆ" ಸುಭದ್ರೆ! ಎನಲು "ಸ್ವಾಮೀ! ತಾವು ಸನ್ಯಾಸಿಗಳು, ಅಬಲೆಯರು ನಿಮ್ಮಂಥವರ ಹತ್ತಿರಕ್ಕೆ ಬರಬಾರದು. ನನ್ನ ಸೇವೆ ದೂರದಿಂದಲೇ ಸ್ವಿಕರಿಸಬೇಕು" ಎಂದು ಅನ್ನುತ್ತಾ ಸುಭದ್ರೆ ಇನ್ನಿಷ್ಟು ದೂರಸರಿಯುತ್ತಿದ್ದಂತೆ ಅರ್ಜುನನು ಅವಳ ಕೈ ಹಿಡಿದು ಬದಿಯಕ್ಕೆಳೆಯುತ್ತಿರಲು, ಕೋಪದಿಂದ "ನೀಯಂಥಾ ಸನ್ಯಾಸಿ? ನಿನ್ನ ಈ ಕಪಟ ನಾಟಕ ಸಾಕು ಮಾಡು? ನನ್ನ ಅಣ್ಣಂದಿರಿಗೆ ನಿನ್ನ ಮೋಸತನವನ್ನು ಬಯಲಿಗಿಟ್ಟು ಕಠಿಣವಾದ ಶಿಕ್ಷೆಗೆ ಗುರಿಮಾಡುವೆನು. ಬಿಡು ಕೈ?" ಎಂದು ತನ ಕೈಯನ್ನು ಬಲದಿಂದ ಹಿಂದಕ್ಕೆ ಎಳೆಯುತ್ತಿರಲು ಅವಳ ಕೈ ಸನ್ಯಾಸಿಯ ಗಡ್ಡ ತರಚಿತು. ಗಡ್ಡವುಚ್ಚಿತು. ಮೀಸೆ ಜಾರಿ ಕೆಳಗೆ ಬಿದ್ದಿತು. ಆಗ ಆತನ ಮೋಹನ ರೂಪ ಬಯಲಾಯಿತು. ಇಷ್ಟೆಲ್ಲ ಕಂಡ ಸುಭದ್ರೆ ಚಕಿತಳಾಗಿ ಆಶ್ಚರ್ಯದಿಂದ ಮುಗ್ಧಳಾಗಿ ಅವನನ್ನು ಎವೆ ಇಕ್ಕದೆ ನೋಡುತ್ತ ನಿಂತು ಬಿಟ್ಟಳು. ಅರ್ಜುನನು ಲಜ್ಜಿತನಾಗಿ ಅವಳನ್ನೇ ನೋಡುತ್ತನಿಂತು ಕೊಂಡನು. ಬಹಳ ಸಮಯ ನಿಶ್ಯಬ್ಧ ಆವರಿಸಿತು. ಒಬ್ಬರನ್ನೊಬ್ಬರು ದಿಟ್ಟಿಸಿ ನೋಡುತ್ತಲೆ ನಿಂತು ಬಿಟ್ಟರು. ಯಾರು ಯಾರನ್ನು ಮಾತನಾಡಿಸಲಿಲ್ಲ. ಆಗ ಶ್ರೀ ಕೃಷ್ಣನು ಅಲ್ಲಿಗೆ ಬಂದು ಅವರಿಬ್ಬರ ಪರಿಸ್ಥಿತಿಯನ್ನು ಕಂಡು ಮುಗುಳು ನಗೆಯಿಂದ "ತಂಗೀ! ಸುಭದ್ರೆ ಇವನೇ ಆ ನಿನ್ನ ಕೋರಿಕೆಯ ವಲ್ಲಭ. ಅರ್ಜುನ. ಇಷ್ಟುದಿನದಿಂದ ಅವನಿಗಾಗಿ ಮಾಡುತ್ತಿದ್ದ ತಪಸ್ಸು ಇಂದಿಗೆ ಫಲಿಸಿತು. ಈತನು ಕೆಲವು ಕಾರಣಗಳಿಂದ ಈರೀತಿ ವೇಷವನ್ನು ಧರಿಸಿ ಕೊಂಡು ನಮ್ಮೂರಿಗೆ ಬಂದು ಬಿಟ್ಟನು. ನಾನೇ ಇವನನ್ನು ಗುರ್ತಿಸಿ ಅಣ್ಣನಾದ ಬಲರಾಮನು ನಿನ್ನನ್ನು ದುರ್ಯೋಧನನಿಗೆ ಕೊಡಲು ಮಾತು ಕೊಟ್ಟ ವಿಷಯ ತಿಳಿದು, ಹೀಗೆ ಆಗಬಾರದೆಂಬ ಸಂಕಲ್ಪದಿಂದ ಈ ನಾಟಕವನ್ನು ಈ ರೀತಿ ಸಾಗುವಂತೆ ಮುಂದುವರಿಸಿದೆನು. ಈಗ ರುಕ್ಮಿಣಿಯು ಇಲ್ಲಿಗೆ ಬರುವಳೆಂದು ಹೇಳುತ್ತಿರಲು ರುಕ್ಮಿಣಿಯು ಸ್ವಾಮಿದರ್ಶನಾರ್ಥವಾಗಿ ಅಲ್ಲಿಗೆ ಬಂದಳು. ಸ್ವಾಮಿಗಳಿಗೆ ಗಡ್ಡಮಿಸೆಗಳು ಜಾರಿಬಿದ್ದಿವೆ. ಮಹ ವರ್ಚಸ್ಸುಳ್ಳ ಯುವಕನು ಎದುರುಗಡೆ ನಿಂತಿರುವನು. ಆತನನ್ನು ದಿಟ್ಟಿಸಿ ನೋಡಿದಾಗ ಅವನು ಅರ್ಜುನನೆಂದು ಭಾಸವಾಯಿತು.

"ಇದೇನು! ಆ ಸ್ವಾಮಿ ಎಲ್ಲಿಗೆ ಹೋದರು?" ಎಂದು ರುಕ್ಮಿಣಿ ಪ್ರಶ್ನಿಸಿದಳು. ಆಕೆಯ

ಪ್ರಶ್ನೆಗೆ ಶ್ರೀಕೃಷ್ಣನು ಎಲ್ಲಾ ವಿಷಯಗಳನ್ನು ವಿಶದವಾಗಿ ತಿಳಿಸಿ "ನಮ್ಮ ಸುಭದ್ರೆಯ ಮನೋಭೀಷ್ಟ ಈ ರೀತಿಯಾಗಿ ಈಡೇರಲಿದೆ. ಎಲ್ಲಾ ನಮ್ಮ ಒಳ್ಳೆಯದಕ್ಕೆ" ಎಂದನು. ಎಲ್ಲರು ಸಂತಸದಿಂದ ಅರ್ಜುನನ್ನು ಬಿಟ್ಟು ತಮ್ಮ ಅರಮನೆ ಸೇರಿದರು.

ಆ ದಿನ ರಾತ್ರಿ ರುಕ್ಮಿಣಿ ಶ್ರೀ ಕೃಷ್ಣರು ಅಣ್ಣನಾದ ಬಲರಾಮನಿಗೆ ತಿಳಿಯದಂತೆ ಸುಭದ್ರೆ ಅರ್ಜುನರ ಮದುವೆ ಆ ರಾತ್ರಿಯೆ ನೆರವೇರಿಸಬೇಕೆಂದು ನಿರ್ಣಯಿಸಿದರು. ಆ ಮೇಲೆ ರಾತ್ರಿಯವರೆಗೆ ಲಗ್ನದ ಎಲ್ಲಾ ಸಿದ್ಧತೆಗಳನ್ನು ಮಾಡಲು ರುಕ್ಮಿಣಿಗೆ ಶ್ರೀ ಕೃಷ್ಣನು ಸೂಚಿಸಿ ತನ್ನ ಕೆಲಸದ ಮೇಲೆ ಹೊರಗೆ ಹೊರಟು ಹೋದನು. ರುಕ್ಮಿಣಿದೇವಿ ಯಾರಿಗೂ ತಿಳಿಯದಂತೆ ಕಾರ್ಯನಿರ್ವಹಿಸಿ ರಾತ್ರಿಯಾಗಲು ನಿರೀಕ್ಷಿಸಿದಳು.

ಸುಮಾರು ಸೂರ್ಯಾಸ್ತಮದ ಸಮಯದಲ್ಲಿ ಶ್ರೀ ಕೃಷ್ಣನು ರಾಜಭವನ ಸೇರಿದನು. ಸ್ವಲ್ಪಕಾಲ ತಂದೆ, ಅಣ್ಣನ ಕೂಡ ಮಾತನಾಡಿದನು. ತರುವಾಯ ತನ್ನ ಕಕ್ಷಕ್ಕೆ ಪ್ರವೇಶಿಸಿದನು. ಅಲ್ಲಿ ರುಕ್ಮಿಣಿದೇವಿ ಮದುವೆಗಾಗಿ ಎಲ್ಲಾ ಸಿದ್ಧತೆ ಮಾಡಿಟ್ಟು ಶ್ರೀ ಕೃಷ್ಣನಿಗೆ ತೋರಿಸಿದಳು. ಆತನು ಎಲ್ಲಾ ನೋಡಿ ಸಂತಸ ಗೊಂಡು ಹಿಂದಲೆ ಯಾರಿಗೂ ತಿಳಿಯದಂತೆ ಮದುವೆ ಸಾಮಗ್ರಿಯನ್ನು ದಾಸಿಯ ಜನರ ಕೂಡ ರಹಸ್ಯವಾಗಿ ಪೂಜಾಗೃಹಕ್ಕೆ ಸಾಗಿಸಿ, ಸುಭದ್ರೆಗೆ ರುಕ್ಮಿಣಿದೇವಿ ತಾನೇ ಸ್ವತಃ ನೂತನ ದುಕೂಲವನ್ನುಡಿಸಿ ದೇವಕನ್ಯಳಂತೆ ಅಲಂಕರಿಸಿ ಪೂಜಾಗೃಹಕ್ಕೆ ಅಣ್ಣಾ ಅತ್ತಿಗೆಯರೇ ಕರೆದು ಕೊಂಡು ಹೋಗಿ ಸುಭದ್ರೆಯ ಕೈಯಲ್ಲಿ ಕುಸುಮ ಮಾಲೆಯನ್ನು ರುಕ್ಮಿಣಿ ಕೊಟ್ಟಳು. ಶ್ರೀಕೃಷ್ಣನು ಕಪಟ ವೇಷಧಾರಿಯ ಕೈಗೆ ಹೂವಿನ ಮಾಲೆ ಹಾಕಲು ಹೇಳಿ ವಿವಾಹವನ್ನು ಮುಗಿಸಿದರು. ಆಗ ಶ್ರೀ ಕೃಷ್ಣನು ಅರ್ಜುನನ ಕಿವಿಯಲ್ಲಿ ಏನೋ ರಹಸ್ಯವನ್ನು ಹೇಳಿದನು. ಆಗ ಅರ್ಜುನನು ತನ್ನ ಯಾತ್ರಾ ಪರ್ಯಟನೆ ಮುಗಿಯುತ್ತಿರುವ ವಿಷಯ ಸುಭದ್ರೆ, ರುಕ್ಮಿಣಿ, ಶ್ರೀಕೃಷ್ಣರಿಗೆ ತಿಳಿಸಿ, ತಮ್ಮ ಅಣ್ಣನವರಿರುವ ಸ್ಥಳಕ್ಕೆ ತಿರುಗಿ ಪ್ರಯಾಣ ಬೆಳೆಸಿದನು. ನಾಲ್ಕಾರು ದಿನಗಳಲ್ಲಿ ತಮ್ಮ ಸೋದರರನ್ನು ಸೇರಿಕೊಂಡನು. ಆ ಮೇಲೆ ಕೆಲವು ದಿನ ಕಳೆದ ನಂತರ ಪಾಂಡವರನ್ನೂ ಕಾಣಲು ಶ್ರೀ ಕೃಷ್ಣನು ಪಾಂಡವರಿದ್ದ ವನಕ್ಕೆ ಹೋದನು.

ಒಂದು ದಿನ ಕೃಷ್ಣಾರ್ಜುನರು ಸಾಯಂಕಾಲ ವಿಹಾರಾರ್ಥವಾಗಿ ಅರಣ್ಯ ಪ್ರಾಂತದಲ್ಲಿ ತಿರುಗಾಡುತ್ತ ಖಾಂಡವವನದ ಹತ್ತಿರ ಹಸಿರು ಹುಲ್ಲಿನ ಮೇಲೆ ಕುಳಿತು ಮುಂದೆ ಬರುವ ಅಜ್ಞಾತವಾಸವನ್ನೆಲ್ಲಿ ಕಳೆಯಬೇಕೆಂಬ ವಿಚಾರವನ್ನು ಮಾತಾಡುತ್ತಿರಲು. ಅಗ್ನಿ ದೇವನು ಉದರ ವ್ಯಾಧಿಯಿಂದ ಸಂಕಟ ಪಡುತ್ತ ಆಯಾಸದಿಂದ ಶ್ರೀಕೃಷ್ಣನನ್ನು ಕಂಡು ನಮಸ್ಕರಿಸಿ "ದೇವಾ! ನನ್ನನ್ನು ರಕ್ಷಿಸಬೇಕು. ನಾನೀಗ ಅಜೀರ್ಣವ್ಯಾಧಿಯಿಂದ ಬಳಲುತ್ತಿರುವೆನು. ದಯಮಾಡಿ ಯಾವುದಾದರು ಉಪಾಯಾದಿಂದ ನನ್ನ ಈ ವ್ಯಾಧಿಯನ್ನು ನಿವಾರಿಸಲು ನೀವೆ ಸಮರ್ಥರು. "ರಕ್ಷಮಾಂ ಪಾಹಿಮಾಂ" ಎಂದು ಶ್ರೀಕೃಷ್ಣನ ಪಾದಗಳ ಮೇಲೆ ಬಿದ್ದು ಹೊರಳಾಡುತ್ತ ಪ್ರಾರ್ಥಿಸಿದನು. ಆಗ ಕೃಷ್ಣ ಭಗವಾನನು, ಅಗ್ನಿಯನ್ನು ಕುರಿತು. "ನಿನಗೆ ತಿಳಿದದ್ದು ಮತ್ತು ಆ ಕಾರ್ಯ ನಿನಗೆ ಆ ಸಾಧ್ಯವಾದದ್ದು

ಆದರೆ ಹೇಳು! ನೀನೇನು ಚಿಂತಿಸಬೇಡ" ಎಂದು ಶ್ರೀಹರಿ ಕೇಳಲು, ಅಗ್ನಿ "ದೇವಾ! ಇಲ್ಲೆ ಇರುವ ಖಾಂಡವವನದಲ್ಲಿ ಅನೇಕಾನೇಕವಾದ ಔಷಧಗಳಿವೆ. ಅದನ್ನು ದಹಿಸಲು ಪಾಂಡವ ಮಧ್ಯಮರಾದ ಅರ್ಜುನರಿಂದ ಮಾತ್ರ ಸಾಧ್ಯ. ಆದ ಕಾರಣ ಅವರಿಂದ ಈ ಕಾರ್ಯವನ್ನು ಮಾಡಿಸಿದಲ್ಲಿ ನನ್ನ ಅಜೀರ್ಣ ವ್ಯಾಧಿ ನಿವಾರಣೆ ಯಾಗುವುದು. ಇದಕ್ಕೆ ಕಾರಣವೇನೆಂದರೆ ಋಷಿ, ಮುನಿಗಳು ಧರ್ಮನಿರತರಾದ ಮಹನೀಯರು ಯಜ್ಞಗಳನ್ನು ಮಾಡುತಿದ್ದು, ಅವರು ಸಮರ್ಪಿಸಿದ ಹವಿಸ್ಸನ್ನು ಆಯಾ ದೇವತೆಗಳಿಗೆ ಮುಟ್ಟುವಂತೆ ಮಂತ್ರಗಳಿಂದ ಅರ್ಪಿಸುತ್ತಿರುವರು. ಆದರೆ ಒಂದೊಂದು ಸಲ ಮಂತ್ರಗಳಿಲ್ಲದೆ, "ಸ್ವಾಹ" ಎಂದು ಅಗ್ನಿಗೆ ಹಾಕಿದ ತುಪ್ಪ ಯಾರಿಗೆ ಸೇರಬೇಕು? ಅಂತಹುದೆಲ್ಲ ಅಮಂತ್ರಿತ ಭಾಗವೆಲ್ಲ ನನ್ನ ಪಾಲೆ, ಹೀಗಾಗಿ ಆ ಮಂತ್ರದಿಂದ ಸಮರ್ಪಣೆ ಮಾಡಿದ ಅಪಾರವಾದ ಘೃತದಿಂದ ಈ ವ್ಯಾಧಿ ಬಂದು ನನ್ನ ದೇಹದಲ್ಲಿ ಸೇರಿ ನನಗೆ ಅನೇಕವಾದ ಬಾಧೆ ಕೊಡುತ್ತಿರುವದು. ಆದ ಕಾರಣ ಈ ಪಾಂಡವ ಮಧ್ಯಮರಾದ ಅರ್ಜುನನಿಗೆ ಅಪ್ಪಣೆ ಮಾಡಿರಿ." ಎಂದು ಪ್ರಾರ್ಥಿಸಿ ಕೊಂಡನು.

ಶ್ರೀಕೃಷ್ಣನು ಅಗ್ನಿದೇವನ ಉದರ ವ್ಯಾಧಿಗೆ ಕಾರಣವನ್ನು ಅವನ ಬಾಯಿಂದ ಕೇಳಿ ಅರ್ಜುನನನ್ನು ಕುರಿತು "ಅರ್ಜುನಾ! ಆಗ್ನೆಯಾಸ್ತ್ರವನ್ನು ಪ್ರಯೊಗಿಸಿ ಈ ಖಾಂಡವ ವನವನ್ನು ದಹಿಸುವಂತೆ ಮಾಡಿ ಅಗ್ನಿಯ ಉದರ ಶೂಲೆಯನ್ನು ನಿವಾರಣೆ ಯಾಗುವಂತೆ ಮಾಡು" ಎಂದು ಅರ್ಜುನನಿಗೆ ಅಪ್ಪಣೆ ಮಾಡಲು, ತನ್ನ ಬತ್ತಳಿಕೆಯಲ್ಲಿದ್ದ ಆಗ್ನೆಯಾಸ್ತ್ರವನ್ನು ಹಿಂದಲೆ ಅರ್ಜುನನು ಪ್ರಯೋಗಿಸಿ ಖಾಂಡವ ವನವನ್ನು ದಹಿಸುವಂತೆ ಮಾಡಿದನು. ಅದೇ ಸಮಯಕ್ಕೆ ಸರಿಯಾಗಿ ತಕ್ಷಕನೆಂಬ ಸರ್ಪ ಒಂದು ಆ ವನದಲ್ಲಿ ಅಡಗಿ ಮಲಗಿತ್ತು. ದಹಿಸುತ್ತಿದ್ದ ವನದ ಅಗ್ನಿಯ ಜ್ವಾಲೆಗಳು ಮೂರುಭಾಗಗಳಿಂದ ಭಯಂಕರವಾಗಿ ವ್ಯಾಪಿಸಿ ಅದರ ಶೆಕೆಗೆ ತಾಳಲಾರದೆ ತಕ್ಷಕನು ನಾಲ್ಕನೇ ದಿಕ್ಕಿಗೆ ಜ್ವಾಲೆ ಬರುವ ಮುಂಚಿತವಾಗಿ ತಪ್ಪಿಸಿ ಕೊಂಡು ಹೊರಬಂದನು. ಈ ಬೆಂಕಿಗೆ ಕಾರಣವೇನೆಂದು ನಾಲ್ಕು ದಿಕ್ಕಿಗೆ ನೋಡುತ್ತಿರಲು, ದೂರದಲ್ಲಿ ಕೃಷ್ಣಾರ್ಜುನರನ್ನು ಕಂಡು, "ಈ ಕೆಲಸ ಅರ್ಜುನನಿಂದಲೆ ಸಾಧ್ಯವೆಂದು ತಿಳಿದು, ಹಿಂದಿನ ಅವಮಾನದ ನೆನಪಾಗಿ, ಮುಂದೆ ಬರುವ ಕುರುಕ್ಷೇತ್ರ ಯುದ್ಧದಲ್ಲಿ ಅರ್ಜುನನನ್ನು ಹತಮಾಡಬೇಕೆಂದು ಸಂಕಲ್ಪ ಮಾಡಿ ಅಲ್ಲಿಂದ ಹೊರಟು ಕೌರವರ ಆತ್ಮೀಯ ಮಿತ್ರನಾದ ಕರ್ಣನ ಬತ್ತಳಿಕೆಯಲ್ಲಿ ಸೇರಿಕೊಂಡನು. ಪಾಂಡವ ಮಧ್ಯಮನೊಂದಿಗೆ ಸಾಯಂಕಾಲವಾಗಲು ಶ್ರೀಕೃಷ್ಣಾರ್ಜುನರು ತಮ್ಮ ನಿವಾಸಕ್ಕೆ ಸೇರಿದರು. ರಾತ್ರಿ ಭೋಜನಾ ನಂತರ ಹನ್ನೆರಡು ವತ್ಸರಗಳು ಕಳೆಯುತ್ತ ಬರಲು, ಧರ್ಮರಾಯನು ಶ್ರೀಕೃಷ್ಣನ ಮುಂದೆ ತಾವು ಅಜ್ಞಾತ ವಾಸಕ್ಕೆ ತಕ್ಕ ಸ್ಥಳದ ಪ್ರಸ್ತಾಪ ಮಾಡಲು ಶ್ರೀಕೃಷ್ಣನು ಯೋಚಿಸಿ, "ಧರ್ಮನಂದನಾ! ನೀವು ಆರುಜನರು ಬ್ರಾಹ್ಮಣರ ವೇಷದಲ್ಲಿ ವಿರಾಟರಾಯನ ಆಸ್ಥಾನವನ್ನು ಆಶ್ರಯಿಸಿರಿ. ಅಲ್ಲಿ, "ನಾವು ಪಾಂಡವರ ಹತ್ತಿರ ವಿಭಿನ್ನ ಸ್ಥಾನಗಳಲ್ಲಿದ್ದು ಅವರ ಸೇವೆ ಮಾಡುತ್ತಿದ್ದೆವು. ಅವರು ವನವಾಸಕ್ಕೆ ಹೋದಮೇಲೆ ನಾವು ನೆಲೆಗಾಣದೆ ಇಲ್ಲಿಗೆ ಬಂದೆವು." ಎಂದು ತಿಳಿಸಿ, ನಿಮಗೆ ತೋಚಿದ ಪದವಿಗಳಲ್ಲಿ ಇದ್ದಂತೆ ತಿಳಿಸಿರಿ. ಮತ್ತು ಅವರ ಹತ್ತಿರ ಉದ್ಯೋಗದಲ್ಲಿ ನಿಯುಕ್ತರಾಗಿರಿ. ಮುಂದೆ

ನಿಮ್ಮಿಂದ ಅಲ್ಲಿ ಅನೇಕ ಕಾರ್ಯಗಳು ನಡೆಯಬೇಕಾಗಿದೆ. ವಿರಾಟನಗರವೇ ನಿಮ್ಮಗಳಿಗೆ ಪ್ರಸ್ತುತ ಸೂಕ್ತವಾದ ಸ್ಥಳ" ವೆಂದು ಸೂಚಿಸಿದನು. ಶ್ರೀಕೃಷ್ಣನ ಸೂಚನೆಯಂತೆ, ವಿರಾಟನಗರಕ್ಕೆ ಹೋಗಲು ಪಾಂಡವರು ಸಂಸಿದ್ಧರಾದರು. ಮರುದಿನ ಯಾದವೇಂದ್ರನು ಮಥುರಾನಗರಕ್ಕೆ ತೆರಳಿದನು. ಕೆಲವು ದಿನಗಳಲ್ಲಿ ವನವಾಸ ಮುಗಿಯಲು, ಪಾಂಡವರು ವಿರಾಟ ನಗರಕ್ಕೆ ಪ್ರಯಾಣ ಬೆಳೆಸಿದರು.

ವಿರಾಟ ನಗರವನ್ನು ತಲುಪಿದ ಪಾಂಡವರು ವಿರಾಟ ರಾಜನನ್ನು ಸಂಧಿಸಿ, "ನಾವು ಪಾಂಡವರಲ್ಲಿ ಉದ್ಯೋಗ ಮಾಡುತ್ತಿದ್ದೆವು. ಅವರು ಈಗ ವನವಾಸದಲ್ಲಿರುವರು. ಎಲ್ಲಿ ವಾಸಮಾಡುತ್ತಿರುವರೋ ತಿಳಿಯದು. ನಾನು ಧರ್ಮರಾಯನಿಗೆ ಸಮಯೋಚಿತವಾದ ಸೂಚನೆ ಕೊಡುತ್ತಿದ್ದೆನು. ನನ್ನ ಹೆಸರು ತಂತು ಭಟ್ಟ"? ಎಂದು ತಿಳಿಸಿದನು. ಭೀಮಸೇನನು "ನಾನು ಅವರ ಮನೆಯಲ್ಲಿ ರುಚಿ ರುಚಿಯಾದ ಪಕ್ವಾನ್ನ ಸಿದ್ಧ ಪಡಿಸುತ್ತಿದ್ದೆ. ನನ್ನ ಹೆಸರು ವಲ್ಲಲನು" ಎಂದು ನುಡಿದನು. ಅರ್ಜುನನು "ನನ್ನ ಹೆಸರು ಬೃಹನ್ನಳೆ, ನಾನು ರಾಜ ಭವನದಲ್ಲಿದ್ದ ಹೆಣ್ಣು ಮಕ್ಕಳಿಗೆ ನೃತ್ಯ ಗಾಯನಾದಿಗಳನ್ನು ಕಲಿಸುತ್ತಿದ್ದೆನು." ಎಂದು ತಿಳಿಸಿದನು. ನಕುಲ ಸಹದೇವರು "ನಾವು ಒಬ್ಬರು ಅಶ್ವಗಳು, ಮತ್ತೊಬ್ಬರು ಗೋವುಗಳನ್ನು ನೋಡಿ ಕೊಳ್ಳುತ್ತಿದ್ದೆವು." ಎಂದು ತಿಳಿಸಿದರು. ಅವರ ವಿಷಯ ತಿಳಿದ ವಿರಾಟ ರಾಜನು, ಅವರವರಿಗೆ ಯೋಗ್ಯವಾದ ಸ್ಥಾನದಲ್ಲಿ ನಿಯುಕ್ತ ಮಾಡಿದನು. ದ್ರೌಪತಿದೇವಿ, ರಾಜನ ಸಮ್ಮುಖಕ್ಕೆ ಬಂದು, "ನಾನು ದ್ರೌಪತಿದೇವಿ ಹತ್ತಿರ ಅವರ ಅನುಕೂಲದಂತೆ ಅವರ ಅಪ್ಪಣೆ ಪ್ರಕಾರ ನಡೆಯುತ್ತ ಸೇವೆಮಾಡುತ್ತಿದ್ದೆನು. ನನ್ನ ಹೆಸರು ಸೈರಂಧ್ರಿ" ಯೆಂದು ತಿಳಿಸಲು, ಆಕೆಯನ್ನು ರಾಣಿವಾಸದಲ್ಲಿರಲು ತಿಳಿಸಿದನು. ಕೆಲವು ದಿನಗಳಲ್ಲಿ ದಕ್ಷಿಣ ಗೋಗ್ರಹಣ ಪ್ರಾಪ್ತವಾಯಿತು ಪಾಂಡವರ ಕಡೆಯಿಂದ ಕೀಚಕನಿಗೆ ಜಯವಾಯಿತು. ಮುಂದೆ ಕೆಲವು ದಿನಗಳ ನಂತರ ಅಕ್ಕ ಸುದೇಷ್ಣಾದೇವಿ ಮನೆಗೆ ಕೀಚಕ ಬಂದನು. ಅಲ್ಲಿ ಸೈರಂಧ್ರಿ ಎಂಬ ಹೆಸರಿನಿಂದ ದ್ರೌಪತಿ ಅಕ್ಕನ ಮನೆಯಲ್ಲಿ ಕೀಚಕನ ಕಣ್ಣಿಗೆ ಕಾಣಿಸಿ ಕೊಂಡಳು. ಆಕೆಯ ಸೌಂದರ್ಯಕ್ಕೆ ಮರುಳಾಗಿ ದ್ರೌಪತಿಯನ್ನು ತನ್ನ ಮನೆಗೆ ಕಳಿಸೆಂದು ಅಕ್ಕ ಸುದೇಷ್ಣೆಯನ್ನು ಪೀಡಿಸಿದನು. "ಅವಳನ್ನು ನನ್ನ ಮನೆಗೆ ಕಳಿಸದಿದ್ದರೆ ಭಾವನಾದ ವಿರಾಟನ ರಾಜ್ಯವನ್ನು ಅಸ್ತವ್ಯಸ್ಥ ಮಾಡುವೆನೆಂದು ಎಚ್ಚರಿಕೆ ಕೊಟ್ಟನು. ಏನು ಗತ್ಯಂತರವಿಲ್ಲದೆ ತಮ್ಮನ ಮನೆಯಿಂದ ಮದ್ಯವನ್ನು ತರಲು ಸೈರಂಧ್ರಿಯನ್ನು ಮನೆಗೆ ಕಳಿಸಿದಳು. ಕೀಚಕನ ಮನೆಗೆ ಹೋಗುವ ಮುನ್ನ ದ್ರೌಪತಿ ತನ್ನ ಪತಿಯಾದ ಭೀಮಸೇನನಿಗೆ ಈ ವೃತ್ತಾಂತವನ್ನು ತಿಳಿಸಿದಳು. ಭೀಮನು ಯೋಚಿಸಿ "ಕೀಚಕನು ನಿನ್ನನ್ನು ಬಲವಂತ ಮಾಡಿದಾಗ, ಅವನನ್ನು ಇಂದು ರಾತ್ರಿಗೆ ಗರಡಿ ಮನೆಗೆ ಬರಲು ತಿಳಿಸು. ಆ ಮೇಲೆ ನಾನವನನ್ನು ವಿಚಾರಿಸಿ ಕೊಳ್ಳುವೆನೆಂದು ತಿಳಿಸಿ ಕಳಿಸಿದನು. ಅದರಂತೆ ನಡೆಯಿತು. ಅಂದು ರಾತ್ರಿ ಕೀಚಕನನ್ನು ಸ್ತ್ರೀವೇಷಧರಿಸಿದ ಭೀಮಸೇನನು ಕೊಂದು ಬಿಟ್ಟನು.

ಕೀಚಕನ ಮರಣ ವಾರ್ತೆಯನ್ನು ಕೇಳಿದ ಕೌರವರು ಉತ್ತರ ಗೋಗ್ರಹಣ ನಡೆಸಿದರು. ಕೀಚಕನ ಖ್ಯಾತಿಗೆ ಅಂಜಿದ ಕೌರವರಿಗೆ ಈಗ ಮಾರ್ಗ ಸುಗಮವಾಯಿತು. ಅರ್ಜುನನು ಬೃಹನ್ನಳೆಯ ವೇಷದಲ್ಲಿರುವನೆಂಬುದು ಇಷ್ಟಕ್ಕೆ ಪೂರ್ವದಲ್ಲಿಯೇ ತಿಳಿಸಲಾಗಿತ್ತು. ಈಗ ಗೋವುಗಳನ್ನು ಬಿಡಿಸಿ

ತರುವವರಾರೆಂದು ವಿರಾಟನು ವಿಚಾರಿಸುತ್ತಿರಲು! ಬೃಹನ್ನಳ ಬಂದು "ರಾಜಾ! ತಮ್ಮ ಸುಪುತ್ರನಾದ ಉತ್ತರ ಕುಮಾರನಿರಲು ತಾವೇಕೆ ಚಿಂತಿಸುತ್ತಿರುವಿ!! ದಯಮಾಡಿ ಕುಮಾರನನ್ನು ನನ್ನ ಹಿಂದೆ ಕಳಿಸಿರಿ. ಮುಂದಿನ ಕಾರ್ಯ ನಾನು ನೋಡುವೆನು. ತಮಗೆ ಅನುಮಾನವೇ ಬೇಡ" ಎಂದು ತಿಳಿಸಿ, ಒಪ್ಪಿಸಿ, ಉತ್ತರ ಕುಮಾರನನ್ನು ಗೋವುಗಳನ್ನು ಸ್ವಾಧೀನ ಪಡಿಸಿ ಕೊಳ್ಳಲು ಪ್ರಯಾಣ ಬೆಳೆಸಿದನು. ಅಲ್ಲಿ ಕೌರವರ ಸೈನ್ಯ ಯುದ್ಧಮಾಡಲು ಸಿದ್ಧವಾಗಿನಿಂತ ದೃಶ್ಯ ಕಂಡು ಕುಮಾರನು ದಿಗ್ಭ್ರಮೆಯಿಂದ ಹೆದರಿ ರಥನನ್ನಿಳಿದು ಓಡಿ ಹೋಗ ತೊಡಗಿದನು. ಉತ್ತರ ಕುಮಾರನು ರಥದಿಂದ ಇಳಿದು ಓಡುವದನ್ನು ಕಂಡ ಅರ್ಜುನನು ರಥದ ಎರಡನೇ ಕಡೆ ಇಳಿದು ಬೇಗನೆ ಮುಂದಕ್ಕೆ ಸಾಗಿ ಹೋಗಿ ಉತ್ತರ ಕುಮಾರನನ್ನು ಬಿಗಿದಪ್ಪಿ ಹಿಡಿದು ರಥದಲ್ಲಿ ಬಿಗಿದು ಗಟ್ಟಿಯಾಗಿ ಕಟ್ಟಿಹಾಕಿ ತಾನೇ ಸ್ವಯಂ ಬಿಲ್ಲು ಬಾಣಗಳಿಂದ ಕೌರವರ ಸೈನ್ಯವನ್ನು ಸದೆ ಬಡಿದು ಬಹಳಷ್ಟು ಸೈನಿಕರನ್ನು ಕೊಂದು ಬಿಟ್ಟನು. ಅವನ ಯುದ್ಧ ನೈಪುಣ್ಯಕ್ಕೆ ಹೆದರಿ ಮಿಕ್ಕ ಯೋಧರು ಗೋವುಗಳನ್ನು ಬಿಟ್ಟು ತಿರುಗಿ ನೋಡದೆ ಪಲಾಯನವನ್ನು ಮಾಡಿದರು. ತನ್ನ ಸೈನಿಕರಿಗೆ ಗೋವುಗಳನ್ನು ಕರೆದು ಕೊಂಡು ಬರಲು ಸೂಚಿಸಿ ಅರ್ಜುನನು ರಥತದಲ್ಲಿ ಬಂಧಿಸಿದ ಉತ್ತರನನ್ನು ಬಂದ ವಿಮೋಚನೆ ಮಾಡಿ ನಗರಕ್ಕೆ ಹಿಂತಿರಿಗಿದನು. ಅರ್ಜುನನು ನೋಡುವುದಕ್ಕೆ ಹೆಂಗಸಿನ ಹೋಲಿಕೆಯಿದ್ದರೂ ಅವನ ಯುದ್ಧ ನೈಣ್ಯತೆಯನ್ನು ಕಂಡ ಉತ್ತರ ಕುಮಾರನು ಆಶ್ಚರ್ಯದಿಂದ ಚಕಿತನಾಗಿ, ಭಯದಿಂದ ಅವನ ಸಂಗಡ ಮಾತನಾಡಲು ಸಹ ಧೈರ್ಯ ಸಾಲದೆ ಸ್ವಲ್ಪ ಹೊತ್ತು ಮೌನತಾಳಿ ಕಡೆಗೆ ಸ್ವಲ್ಪ ಧೈರ್ಯತಂದು ಕೊಂಡು "ಅಯ್ಯ! ಬೃಹನ್ನಾಲಾ ನೀನು ಇಂಥಾ ರಣರಂಗದಲ್ಲಿ ಅಸ್ತ್ರಗಳನ್ನು ಬಹು ನೈಪುಣ್ಯತೆಯಿಂದ ಸಂಧಿಸಿ ಶತೃಗಳನ್ನು ಕ್ಷಣ ಕಾಲದಲ್ಲಿ ನಿರ್ಮೂಲಗೈದೆ. ಮತ್ತು ಕೆಲವರನ್ನು ತಿರುಗಿ ನೋಡುವದಕ್ಕೆ ಧೈರ್ಯ ಸಾಲದೆ ಓಡಿಹೋಗುವಂತೆ ಮಾಡಿ ಬಿಟ್ಟೆ, ಎಂಥಃ ಧೈರ್ಯವಯ್ಯ ನಿನ್ನದು! ಈ ಅಸ್ತ್ರವಿದ್ಯೆಯನ್ನು ನಿನಗೆ ಕಲಿಸದವರಾರು! ನನಗೆ ಸ್ವಲ್ಪ ಹೇಳುವೆಯಾ! ಹೇಳಲು ನಿನಗೆ ಇಷ್ಟವಿಲ್ಲದಿದ್ದರೆ ಬೇಡ" ವೆಂದು ಹೆದರುತ್ತ ಕೇಳಿದನು.

ಅರ್ಜುನನಿಗೆ ಉತ್ತರ ಕುಮಾರನ ಭಯ ಭೀತಾವಸ್ಥೆಯನ್ನು ಕಂಡು ಕನಿಕರಪಟ್ಟು "ಕುಮಾರಾ! ನಾನು ಅರ್ಜುನನ ಪ್ರಾಣ ಸಖನಾಗಿದ್ದು ಆತನ ಕೂಡಕಲೆತು ಇದ್ದು ನಾವು ಇಬ್ಬರು ದ್ರೋಣಾಚಾರ್ಯರ ಹತ್ತಿರ ಈ ವಿದ್ಯಕಲಿತೆವು." ಎಂದು ಉತ್ತರಿಸಿ ರಥವನ್ನು ನಗರ ಪ್ರವೇಸಿಸಿ, ರಾಜಭವನವನ್ನು ತಲುಪಿದನು. ಆ ಮೇಲೆ ಸ್ವಲ್ಪ ಹೊತ್ತಿನ ನಂತರ ಗೋವುಗಳು ಬಂದವು. ಮಗನು ಜಯಗಳಿಸಿ ರಥದಲ್ಲಿ ಕ್ಷೇಮವಾಗಿ ಗೋವುಗಳನ್ನು ಬಿಡಿಸಿಕೊಂಡು ಬಂದ ವಾರ್ತೆ ಕೇಳಿ, ವಿರಾಟ ಭೂಪತಿ ತನ್ನ ಮಗನ ಧೈರ್ಯ ಸಹಾಸಗಳಿಗೆ ಮೆಚ್ಚಿ, "ಕುಮಾರಾ! ನಿನ್ನ ಸಾಹಸಕ್ಕೆ ನಾನು ಬಹಳವಾಗಿ ಸಂತಸಗೊಂಡನು. ನಾನು ಇನ್ನು ಸಣ್ಣವನೆಂದೇ ಭಾವಿಸಿದ್ದೆ. ಆದರೆ ನೀನು ಈ ದಿನ ಒಬ್ಬ ಪ್ರಯೋಜಕನಾದ ಮಹಾ ಧೈರ್ಯ ಸಹಾಸವುಳ್ಳ ಬಲಶಾಲಿಯನಿಸಿಕೊಂಡಿರುವಿ. ದೇವರು ಸದಾ ನಿನ್ನನ್ನು ಕಾಪಾಡಲಿ ಎಂದು ಸಂತೋಷದಿಂದ ಹರಿಸಿದನು. ತಂದೆಯ ಮಾತುಗಳನ್ನು ಕೇಳುತ್ತನಿಂತಿದ್ದ. ಉತ್ತರ ಕುಮಾರನು "ಅಪ್ಪಾ! ಇಷ್ಟೆಲ್ಲಾ ಸಾಹಸ ಮಾಡಿ ಶತೃಗಳಲ್ಲಿ ಕೆಲವರನ್ನು

ಕೊಂದು ಮತ್ತು ಕೆಲವರನ್ನು ಓಡಿಹೋಗುವಂತೆ ಮಾಡಿದವನು ನಾನಲ್ಲ. ನಾನು ಯುದ್ಧ ಭೂಮಿಗೆ ಹೋಗಿ ನೋಡಿದಾಗ, ಆ ಭೀಕರ ಯೋಧರ ಸೈನ್ಯಕಂಡು ಹಿಂದಕ್ಕೆ ಓಡಿಬರಲು ರಥದಿಂದ ಕೆಳಗೆ ಇಳಿಯುತ್ತಿರಲು, ಅದು ಕಂಡು ಈತನು ನನ್ನನ್ನು ರಥದ ಕಂಬಕ್ಕೆ ಬಿಗಿದು ಕಟ್ಟಿ ತಾನೇ ಧನುರ್ಬಾಣಗಳನ್ನು ಹೊಡೆದು. ಸಾಹಸದಿಂದ ಯುದ್ಧ ಮಾಡಿ ನಮ್ಮ ಗೋವುಗಳನ್ನು ಬಿಡಿಸಿ ತಂದ ಮಹಾಧೈರ್ಯಶಾಲಿ ನಮ್ಮ ನಾಟ್ಯಾಚಾರಿಯಾದ ಬೃಹನ್ನಲನು! ನನ್ನಿಂದ ಯುದ್ಧ ಮಾಡಲು ಸಾಧ್ಯವೆ ಇಲ್ಲ" ಎಂದು ನಡೆದ ವಿಷಯವನ್ನೆಲ್ಲ ಕೂಲಂಕಷವಾಗಿ ತಂದೆಗೆ ತಿಳಿಸಿದನು.

ಉತ್ತರ ಗ್ರೋಗಹಣವಾದ ದಿನಕ್ಕೆ ಸರಿಯಾಗಿ ಒಂದು ವರ್ಷ ಅಜ್ಞಾತವಾಸದ ಅವಧಿ ಮುಗಿಯಿತು. ಅಂದು ರಾತ್ರಿಗೆ ವಿರಾಟರಾಜನ ಉಗ್ರಾಣದಿಂದ ನೂತನ ವಸ್ತ್ರಗಳು ತಂದಿಡಲು ತಂತು ಭಟ್ಟನೆಂದು, ರಾಜನ ಆಪ್ತ ವಿಚಾರಗಳನ್ನು ಹೇಳುವುನಾದ ಧರ್ಮರಾಜನು ರಾಜಸೇವಕರಿಗೆ ತಿಳಿಸಲು ರಾಜನ ಆತ್ಮೀಯರೆಂಬ ಅಭಿಮಾನದಿಂದ ಸೇವಕನು ಅವರಿಗೆ ಬೇಕಾದ ನೂತನ ವಸ್ತ್ರಗಳನ್ನು ತಂದಿಟ್ಟು ಹೋದನು. ಅಂದು ರಾತ್ರಿ ಎಲ್ಲರು ನಿದ್ರೆಯಲ್ಲಿರಲು, ದ್ರೌಪತಿ ಸಮೇತ ಪಾಂಡವರೈವರು, ಏಕಾಂತಸ್ಥಳದಲ್ಲಿ ಕುಳಿತು, ಮರುದಿನ ಬೆಳಿಗ್ಗೆ ಧರ್ಮರಾಯನನ್ನು ವಿರಾಟರಾಜನ ಸಿಂಹಾಸನದಲ್ಲಿ ಆದಿರೋಹಿಸುವ? ವಿಚಾರವನ್ನು ಆಪ್ತಾಲೋಚನೆಯನ್ನು ಮಾಡಿ, ತದ ನಂತರ ತಮ್ಮ ತಮ್ಮ ಶಯನ ಮಂದಿರಕ್ಕೆ ಹೋಗಿ ಮಲಗಿದರು.

ಮರುದಿನ ಪಾಂಡವರು ಮತ್ತು ದ್ರೌಪತಿದೇವಿಯು ಪ್ರಾತಃಕಾಲದಲ್ಲಿ ನಿದ್ರೆಯಿಂದ ಎದ್ದು ಕಾಲ ಕೃತ್ಯಾದಿಗಳ ನೆರವೇರಿಸಿ ಸ್ನಾನ ಮಾಡಿ ತಮ್ಮ ಇಷ್ಟ ದೈವವನ್ನು ಪ್ರಾರ್ಥಿಸಿ ನೂತನ ವಸ್ತ್ರಧಾರಣ ಮಾಡಿ ಸಕಾಲದಲ್ಲಿ ದ್ರೌಪತಿ ಸಮೇತರಾಗಿ ಓಲಗದಲ್ಲಿದ್ದ ವಿರಾಟನ ರತ್ನ ಖಚಿತ ಸುವರ್ಣಸಿಂಹಾಸನವನ್ನು ಸಮೀಪಿಸಿ, ಸಿಂಹಾಸನಕ್ಕೆ ರಾಜಲಾಂಛನದ ಪೂಜೆ ಮಾಡಿ, ಪಾಂಡವ ಜೇಷ್ಠನಾದ ಧರ್ಮನಂದನನ್ನು ಸಿಂಹಾಸನದಲ್ಲಿ ಅಧಿ ರೋಹಿಸಿ. ಭೀಮಾರ್ಜುನ, ನಕುಲ ಸಹದೇವರಾದ ನಾಲ್ವರು ಸಹೋದರರು ಪರಾಕೆಂದು ಹೇಳುತ್ತ ನಾಲ್ಕು ಕಡೆಗಳಲ್ಲಿ ನಿಂತ ದೃಶ್ಯವನ್ನು ಒಬ್ಬ ರಾಜ ಸೇವಕನು ಅವರನ್ನು ನೋಡಿ ವಿರಾಟನ ಪತ್ನಿಯಾದ ಸುದೇಷ್ಣಾಗೂ ವಿರಾಟನಿಗು "ತಮ್ಮಲ್ಲಿ ಸೇವೆ ಮಾಡಲು ಬಂದ ತಂತುಭಟ್ಟ ಮತ್ತು ಸೈರಂಧ್ರಿಯು ಸಿಂಹಾಸನದಲ್ಲಿ ಕುಳಿತಿರುವಳು, ಉಳಿದ ನಾಲ್ವರು ನಾಲ್ಕು ಕಡೆ ನಿಂತ ಛಾಮರಗಳನ್ನು ಪಿಡಿದು ಬೀಸುತ್ತ ಪರಾಕು ವಚನವನ್ನು ಹೇಳುತ್ತ ನಿಂತಿರುವರು". ಎಂದು ನಮ್ರತೆಯಿಂದ ಹೇಳಿದನು. ಆ ಮಾತನ್ನು ಕೇಳಿದ ವಿರಾಟನು ಕೋಪಾದ್ರೇಕದಿಂದ ಆವೇಶಗೊಂಡು ಓಲಗದ ಭವನಕ್ಕೆ ಬಂದು ಸೇವಕನು ಹೇಳಿದಂತೆ ಅವರನ್ನು ನೋಡಿ "ನೀವು ಯಾರು? ನನ್ನ ಸಿಂಹಸನದ ಮೇಲೆ ಕೂಡಲು ನಿಮಗೆಷ್ಟು ಧೈರ್ಯ?" ಎಂದು ವಿರಾಟನು ಕೇಳಲು, ಅರ್ಜುನನು ವಿರಾಟ ರಾಜನ ಮುಂದಕ್ಕೆ ಬಂದು ಮರ್ಯಾದೆಯಿಂದ, "ವಿರಾಟ ರಾಜರೇ, ಸಿಂಹಾನದಲ್ಲಿ ಆಶೀನರಾಗಿರುವವರು ಪಾಂಡವಾಗ್ರಜರಾದ ಧರ್ಮರಾಜರು, ಅವರು ತಮ್ಮಲ್ಲಿ ತಂತುಭಟ್ಟನೆಂಬ ಹೆಸರಿನವರು. ಅವರ ಪಕ್ಕದಲ್ಲಿ ಸೈರಂಧ್ರಿಯಾಗಿ ನಿಮ್ಮ ರಾಣಿವಾಸದಲ್ಲಿ

ಸೇವೆಮಾಡುತ್ತಿದ್ದವರೆ ದ್ರೌಪತಿ, ಇವರು ನಿಮ್ಮ ಪಾಕಶಾಲೆಯಲ್ಲಿ ಅಡುಗೆ ಮಾಡುತ್ತಿದ್ದ ವಲ್ಲಾಲನೆಂಬುವರು ಮಹಾಬಲಷ್ಟ ಭೀಮಸೇನರು, ನಾನು ಬೃಹನ್ನಳೆ ರೂಪದಿಂದ್ದವನು ನಾನೇ ಅರ್ಜುನನು (ಅಪ್ಸರೆಯ ಶಾಪದಿಂದ ನನ್ನ ರೂಪ ಬೇರೆಯಾಗಿತ್ತು.! ಇಂದಿಗೆ ನನ್ನ ಶಾಪ ವಿಮೋಚನೆಯಾಯಿತು.) ಇವರು ಇಬ್ಬರು ನಿಮ್ಮ ಅಶ್ವಗೋರಕ್ಷಕರಾಗಿ ಇದ್ದವರು ನಕುಲ ಸಹದೇವರು. ಈ ಒಂದು ವರ್ಷ ಅಜ್ಞಾತವಾಸವನ್ನು ತಮ್ಮ ಆಶ್ರಯದಲ್ಲಿ ಕಳೆದೆವು ನಿನ್ನೆಗೆ ಆ ಅವಧಿ ಮುಗಿಯಿತು. ನಿಮ್ಮ ಈ ಉಪಕಾರವನ್ನು ನಾವೆಂದಿಗೂ ಮರೆಯಲಾರೆವು" ಎಂದು ನಮಸ್ಕರಿಸಿ ತಿಳಿ ಹೇಳಿದನು. ಆಗ ಚಕಿತನಾಗಿ ವಿರಾಟನು ಪಾಂಡವರ ಕೂಡ "ಮಹರಾಜರೇ ನನ್ನ ಅಪರಾಧವನ್ನು ಮನ್ನಿಸಬೇಕು. ಇದುವರೆಗು ತಾವು ಯಾರು ಎಂಬುವದೇ ಅರ್ಥವಾಗದೆ ಒಂದು ವರ್ಷದಿಂದ ನಿಮ್ಮನ್ನು ನಾನಾ ಮಾತಾಡಿ, ಅಪಚಾರವನ್ನು ಮಾಡಿದೆ. ಆದರು ನೀವು ಶಾಂತರಾಗಿಯೇ ನನ್ನ ಹಿತವನ್ನೆ ಕೋರುತ್ತ ನನಗೆ ಸೂಕ್ತವಾದ ಸಲಹೆಗಳನ್ನಿಯುತ್ತ ಬಂದಿರಿ. ಭೀಮಸೇನ, ಮತ್ತು ಅರ್ಜುನರ ಶಾಂತ ಗುಣಕ್ಕೆ ಎಷ್ಟೆಂದು ವರ್ಣಿಸಿದರು ಕಡಿಮೆ ಅವರು ನಿಮ್ಮ ಆಜ್ಞಾನುವರ್ತಿಗಳಾಗಿ, ಏನೂ ತಿಳಿಯದಂತೆ ವರ್ತಿಸಿದಕ್ಕೆ ವರ್ಣಿಸಲು ನನಗೆ ಸಾಧ್ಯವಾಗದ ಮಾತು." ಎಂದು ತನ್ನ ತಪ್ಪನ್ನು ಕ್ಷಮಿಸ ಬೇಕೆಂದು ಪ್ರಾರ್ಥಿಸಿದನು. ಆಗ ಧರ್ಮರಾಯ "ವಿರಾಟರಾಯನೆ ನಮ್ಮ ಸುಳಿವು ಸ್ವಲ್ಪವಾದರೂ ಇತರರಿಗೆ ತಿಳಿದಿದ್ದಲ್ಲಿ ಪುನಃ ಹನ್ನೆರಡು ವರ್ಷ ವನವಾಸ ಮತ್ತು ಒಂದು ವರ್ಷ ಅಜ್ಞಾತವಾಸ ಮತ್ತೆ ಪ್ರಾಪ್ತವಾಗುತ್ತಿತ್ತು. ನಮಗೆ ನಿಮ್ಮಲ್ಲಿ ಇರುವುದೇ ಸೂಕ್ತವಾದ ತಾಣವೆಂದು ತಿಳಿದೇ ನಾವಿಲ್ಲಿಗೆ ಬಂದು ಸೇರಿದೆವು. ಪರಮಾತ್ಮನ ಕೃಪೆಯಿಂದ ಎಲ್ಲಾ ಸುಗಮವಾಗಿಯೇ ನಡೆಯಿತು. ಆದರೆ ನಾವು ನಿಮಗೆ ತಿಳಿಸದೆ, ನಿಮ್ಮ ಅಪ್ಪಣೆ ಪಡೆಯದೆ ನಿಮ್ಮ ಸಿಂಹಾಸನದಲ್ಲಿ ಕುಳಿತಿದ್ದು ತಪ್ಪು ಎಂದು ಭಾವಿಸುತ್ತೇನೆ, ಈ ನನ್ನ ಅಪರಾಧಕ್ಕೆ ಕ್ಷಮಿಸಬೇಕು. ಅನಿರ್ವ್ಯಾಹವಾದ್ದರಿಂದ, ಇಂದಿಗೆ ಎಲ್ಲಾ ಅಡಚಣೆ ನಿವಾರಣೆಯಾದುದಕ್ಕೆ ರಾಜಮರ್ಯಾದೆಯನ್ನು ಪುನಃ ಪಡೆಯ ಬೇಕಾಯಿತು." ಎಂದು ಧರ್ಮರಾಜ ನುಡಿಯಲು, ವಿರಾಟನು" ಅಯ್ಯ! ಅಂಥ ಮಾತನಾಡಬೇಡಿ, ನಾನು ನಿಮ್ಮ ಸಾಮಂತನು, ನಿಜವಾಗಿ ನೀವು ಕೂಡುವ ಸ್ಥಳದಲ್ಲೇ ಕುಳಿತಿರುವಿರಿ, ಅನ್ಯಥಾ ನಾನೆಂದೂ ಭಾವಿಸುವವನಲ್ಲ, ಹೀಗೇನಾದರು ಆದರೆ ಅದು ನನ್ನ ಅಪರಾಧವೇ ಆಗುತ್ತಿತ್ತು, ಆ ದೇವರ ದಯದಿಂದ ಎಲ್ಲಾ ಸರಿಯಾಗಿಯೆ ನಡೆದಿದೆ." ಆ ರೀತಿಯಾಗಿ ತಾವು ಅಪ್ಪಣೆ ಕೋಡಬಾರದು. ಕ್ಷಮಿಸಿರಿ, ಮುಂದಿನ ತಮ್ಮ ಕಾರ್ಯಕ್ರಮದ ಬಗ್ಗೆ ಏನು ಯೋಜನೆ ಇರುವುದು, ಅಪ್ಪಣೆಯಾಗ ಬೇಕು. ಸಾಧ್ಯವಾದಷ್ಟು ನನ್ನ ಮಿತ್ರರಾಜರಿಂದ ಎಲ್ಲಾ ವಿಧದ ಸಹಕಾರ ನೀವು ಕೋರಿದಾಗ ಇರುತ್ತದೆ. ಅಪ್ಪಣೆ ಆದರೆ ಸಾಕು" ಎಂದು ನುಡಿದನು. ಆ ದಿನ ಎಲ್ಲರು ಸಂತೋಷದಿಂದ ಮೃಷ್ಟಾನ್ನ ಭೋಜನ ಮಾಡಿದರು.

ಮುಂದೆ ಕೆಲವು ದಿನಗಳ ನಂತರ ಪಾಂಡವರು ವಿರಾಟರಾಯನ ಅನುಮತಿ ಪಡೆದು ಹಸ್ತಿನಾವತಿ ನಗರಕ್ಕೆ ಪ್ರಯಾಣ ಬೆಳೆಸಿದರು. ವಿರಾಟನು ರಾಜಲಾಂಛನೆಯಂತೆ ಚಿಕ್ಕರಾಜರು ಸಾರ್ವ ಭೌಮ ರಾಜರಿಗೆ ಯಾವ ವಿಧದ ಮರ್ಯಾದೆ ಸೂಕ್ತವೋ ಅದೇ ರೀತಿಯಿಂದ ಅವರನ್ನು

ಸತ್ಕರಿಸಿ ಪಾಂಡವರ ಜೊತೆಯಲ್ಲಿ ಕೆಲವು ಸೈನ್ಯವನ್ನು ಕೊಟ್ಟು, ಪ್ರಯಾಣಕ್ಕೆ ಬೇಕಾದ ರಥವನ್ನು ಸಿದ್ಧಗೊಳಿಸಿ ಅವರನ್ನು ರಥದಲ್ಲಿ ಪ್ರಯಾಣ ಮಾಡುವಂತೆ ಪ್ರಾರ್ಥನೆ ಮಾಡಿದನು. ಅದಕ್ಕೆ ಪಾಂಡವರು ವಿರಾಟರಾಜನ ಔದಾರ್ಯಕ್ಕೆ ಮೆಚ್ಚಿ ಅವನ ಬೇಡಿಕೆಯಂತೇ ರಥದಲ್ಲಿ ಕುಳಿತು ಪ್ರಯಾಣ ಬೆಳೆಸಲು ಸಮ್ಮತಿಯನ್ನಿತ್ತರು. ಆ ವಿಧವಾಗಿ ಪಾಂಡವರನ್ನು ಸಂತೋಷದಿಂದ ಹಸ್ತಿನಾವತಿಗೆ ಬೀಳ್ಕೊಟ್ಟನು. ಪಾಂಡವರು ಮಾರ್ಗವನ್ನು ಅತಿ ಶೀಘ್ರವಾಗಿ ಆತಿಕ್ರಮಿಸಿ ಹಸ್ತಿನಾಪುರಕ್ಕೆ ಸೇರಿದರು. ತಮ್ಮ ಹಿಂದೆ ಬಂದ ಸೈನಿಕರಿಗೆ ತಿರುಗಿ ವಿರಾಟ ನಗರಕ್ಕೆ ಕಳಿಸಿದರು. ತನ್ನ ಮಕ್ಕಳಾದ ಪಾಂಡವರು ಬಂದ ವಾರ್ತೆಕೇಳಿ ಕುಂತಿದೇವಿ ಸಂತೋಷದಿಂದ ಅವರನ್ನೆದರು ಗೊಂಡು ಮನೆಯನ್ನು ಪ್ರವೇಶಿಸಿದರು. ಧರ್ಮರಾಯನು ವಿದುರನಿಗೆ ಶ್ರೀಕೃಷ್ಣನನ್ನು ಕರೆತರಲು ತಿಳಿಸಿದನು. ಎರಡು ದಿನಗಳನಂತರ ಯಾದವೇಂದ್ರನು ಪಾಂಡವರ ಹತ್ತಿರಕ್ಕೆ ಬಂದನು.

ಮರುದಿನ ಬೆಳಿಗ್ಗೆ ವಿದುರ, ಕುಂತಿಸಮೇತರಾಗಿ ಪಾಂಡವರು ಮುಂದಿನ ರಾಜ್ಯದ ಬಗ್ಗೆ ಪಾಲು ಭಾಗವನ್ನು ಕೌರವರ ಸಂಗಡ ಮಾತನಾಡಿ, ಅವರನ್ನು ಒಪ್ಪಿಸಿ ತಮ್ಮ ಪಾಲು ತಮಗೆ ಕೊಡಿಸುವಂತೆ ಶ್ರೀ ಕೃಷ್ಣನನ್ನು ಪಾಂಡವರು ಪ್ರಾರ್ಥಿಸಿದರು. ಪಾಂಡವರ ಬೇಡಿಕೆಯಂತೆ ರಾಯ ಭಾರಕ್ಕೆ ಶ್ರೀಕೃಷ್ಣ ಒಪ್ಪಿ ಪ್ರಯಾಣಕ್ಕೆ ಸಿದ್ಧನಾದನು. ಮರುದಿನ ರಥದಲ್ಲಿ ಕುಳಿತು ಕೌರವರ ಹತ್ತಿರ ಹೋಗಿ "ಮಾವಾ! ಧೃತರಾಷ್ಟ್ರ ಮಹರಾಜನೆ ಪಾಂಡವರು ನಿನ್ನ ಮತ್ತು ನಿನ್ನ ಮಕ್ಕಳ ಕೋರಿಕೆಯಂತೆ ಹನ್ನೆರಡು ವರ್ಷ ವನವಾಸ ಮತ್ತು ಒಂದು ವರ್ಷ ಅಜ್ಞಾತವಾಸವನ್ನು ಮಾಡಿ ಬಂದಿರುವರು. ಇನ್ನಾದರು ನೀನು ಅವರ ಭಾಗ ಅವರಿಗೆ ಕೊಟ್ಟರೆ ಎಲ್ಲಾದರು ಪಾಂಡವರು ಸುಖವಾಗಿ ಜೀವನವನ್ನು ನಡೆಸಿಕೊಂಡು ಹೋಗುವರು. ನೀವು ಪಾಂಡವರು ಹದಿಮೂರು ವರ್ಷಕಳೆದ ಮೇಲೆ ಅವರಿಗೆ ಪಾಲು ಕೊಡುವದಾಗಿ ತಿಳಿಸಿದಿರಿ. ಅದರಂತೆ ಅವರು ಬಂದಿರುವರು.

ಶ್ರೀ ಕೃಷ್ಣನು ಆಡಿದ ಮಾತುಗಳನ್ನು ಕೇಳುತ್ತ ಅಲ್ಲೆ ಕುಳಿತಿದ್ದ ದುರ್ಯೋಧನನು, ಕೋಪಾವೇಶದಿಂದ " ಪಾಂಡವರಿಗೆ ಎಲ್ಲಿಯ ಪಾಲು? ಅವರಿಗೆ ಸೂಜಿ ಇಡುವಷ್ಟು ಭೂಮಿಯು ಸಹ ಸಿಗುವುದಿಲ್ಲ. ಒಂದು ವೇಳೆ ಅವರು ಅಷ್ಟು ಪರಾಕ್ರಮಿಗಳಾದಲ್ಲಿ ಯುದ್ಧ ಮಾಡಿ ರಾಜ್ಯವನ್ನು ಗೆಲ್ಲಲಿ. ನೀನು ಎಷ್ಟು ಹೇಳಿದರೂ ಪಾಲು ಮಾತ್ರ ಕೊಡುವದು ಸಾಧ್ಯವೇ ಇಲ್ಲ" ಎಂದು ಖಡಾಖಂಡಿತವಾಗಿ ನುಡಿದು ಬಿಟ್ಟನು. ಧೃತರಾಷ್ಟ್ರನು ಮಕ್ಕಳ ಮಾತಿಗೆ ಎದುರಾಡದೆ ತಟಸ್ಥನಾಗಿ ಕುಳಿತಿದ್ದನು. ಸಭೆಯಲ್ಲಿ, ಭೀಷ್ಮ, ದ್ರೋಣ, ಕೃಪಾಚಾರ್ಯರು, ಅಶ್ವತ್ಥಾಮ, ಕರ್ಣ ಮೊದಲಾದವರೂ ಇದ್ದರೂ ಯಾರು ಏನೂ ಹೇಳಲಿಲ್ಲ.

ಶ್ರೀ ಕೃಷ್ಣನು ಧೃತರಾಷ್ಟ್ರನೊಡನೆ "ಮಾವಾ! ಯುದ್ಧದಿಂದ ಎಷ್ಟೋ ಜನ ನಿರಪರಾಧಿಗಳು ಸಾಯುವರು. ಅದರಿಂದ ಯಾರಿಗೂ ಏನು ಪ್ರಯೋಜನವಿಲ್ಲ. ಯುದ್ಧದ ಮಾತನ್ನು ಬಿಟ್ಟು ಬಿಡಿರಿ. ಎಲ್ಲರಿಗೂ ಕ್ಷೇಮವಿರಲಿ," ಎಂದು ಎಷ್ಟು ಪರಿಯಿಂದ ಹೇಳಿದರೂ ಕೌರವರು ಯುದ್ಧವನ್ನೇ ಬಯಸಿದರು. ಶ್ರೀಕೃಷ್ಣನು ಕೌರವರ ಇಚ್ಛೆಯಂತೆ ಆಗಲಿ ಎಂದು ಅಲ್ಲಿಂದ ಹೊರಟು ಹೊರಗೆ

ಬರುತ್ತಿರುವಂತೆ, ಅಲ್ಲೇ ಇದ್ದ ಕರ್ಣನನ್ನು ತನ್ನಹಿಂದೆ ಹೊರಗೆ ಬರುವಂತೆ ಸೂಚಿಸಿದನು. ಕರ್ಣನು ಶ್ರೀಕೃಷ್ಣನ ಸೂಚನೆಯನ್ನು ಗ್ರಹಿಸಿ ಹೊರಗೆ ಗೋಪಾಲನ ಹಿಂದೆ ಸ್ವಲ್ಪದೂರ ಬಂದನು.

ಶ್ರೀ ಕೃಷ್ಣನು ಏಕಾಂತದಲ್ಲಿ ಕರ್ಣನ ಜನ್ಮ ವೃತ್ತಾಂತದ ರಹಸ್ಯವನ್ನು ತಿಳಿಸಿದನು. ಆಗ ಕರ್ಣನು "ನಾನು ಕುರುರಾಜನಿಗೆ ಬೆಂಬಲನಾಗಿರುವೆನು. ಈಗ ವಚನ ಭ್ರಷ್ಟನಾಗಲು ನಾನು ಸಿದ್ಧನಾಗುವುದಿಲ್ಲ. ಮುಂದೆ ಪಾಂಡವರು ಐವರೆ! ನಾನು ಸತ್ತರೆ ಆವರೈವರು. ಅರ್ಜುನ ಸತ್ತಲ್ಲಿ ನಾವೈವರು. ಈ ರೀತಿಯಾಗಿ ನಿನ್ನ ನಿರ್ಣಯವಿರುವಾಗ, ಪಾಂಡವರು ಆರು ಜನವಾಗಿರುವುದು ಹೇಗೆ ಸಾಧ್ಯ?" ಎಂದು ಸ್ಪಷ್ಟವಾಗಿ ನುಡಿದನು. ಆಗ ಶ್ರೀ ಕೃಷ್ಣನು ಪಾಂಡವರ ಹತ್ತಿರ ಬಂದು, " ಧರ್ಮತನಯಾ! ಆ ಮೂರ್ಖರು ಎಷ್ಟು ತಿಳಿಯ ಹೇಳಿದರೂ ಯುದ್ಧ ಮಾಡಿ ಸಾಯಲು ಸಿದ್ಧವಾಗಿರುವರು. ಅವರ ಜೊತೆಯಲ್ಲಿ ನಿಮ್ಮ ಅಗ್ರಜನಾದ ಕರ್ಣನು ಸಹಾ ಅವರಂತೆ ನುಡಿದನು. ಮುಂದೆ ಯುದ್ಧ ಮಾತ್ರ ಅನಿವಾರ್ಯವಾಗಿದೆ ". ಎಂದು ಶ್ರೀ ಕೃಷ್ಣನು ವಿಸ್ತಾರವಾಗಿ ತಿಳಿಸಿದನು. ಮತ್ತು ಎಲ್ಲರ ಸಮ್ಮುಖದಲ್ಲಿ ಕುಂತಿದೇವಿಯನ್ನು ಕುರಿತು. "ಅತ್ತೆ! ನಿಮಗೆ ಮುಖ್ಯವಾದ ಒಂದು ವಿಚಾರ ತಿಳಿಸುತ್ತೇನೆ. ಅದರಂತೆ ನೀವು ನಡಿಯಬೇಕು. ಅದೇನೆಂದರೆ! ನೀವು ಕರ್ಣನ ಹತ್ತಿರ ಹೋಗಿ ಅವನನ್ನು ತೊಟ್ಟ ಬಾಣ ತೋಡುವುದಿಲ್ಲವೆಂದು ವಚನ ತೆಗೆದುಕೊಳ್ಳಬೇಕು. ತಕ್ಷಕನು ಅರ್ಜುನನ ಮೇಲೆ ಹಗೆತೊಟ್ಟು ಕರ್ಣನ ಬತ್ತಳಿಕೆಯಲ್ಲಿ ಸೇರಿಕೊಂಡಿರುವನು. ಈಗ ಕುರುಪಾಂಡವರ ಯುದ್ಧ ಅನಿವಾರ್ಯವಾಗಿದೆ. ಆದ ಕಾರಣ ದಯವಿಟ್ಟು ನಿಮ್ಮ ಪುತ್ರನಾದ ಅರ್ಜುನನನ್ನು ಮೃತ್ಯುನಿಂದ ಕಾಪಾಡಬೇಕು. ಅವನನ್ನು ಕಾಪಾಡಲು ಇದು ಒಂದೇ ಮಾರ್ಗ ಮಾತ್ರ ಉಳಿದಿದೆ.

ಶ್ರೀಕೃಷ್ಣನ ಅಪ್ಪಣೆಯಂತೆ ಕುಂತಿದೇವಿ ಕರ್ಣನ ಹತ್ತಿರಕ್ಕೆ ಹೋದಳು. ತಾಯಿಯನ್ನು ಕಂಡ ಕರ್ಣನು ಭಕ್ತಿ ಮರ್ಯಾದೆಯಿಂದ ಆಕೆಯನ್ನು ತನ್ನ ಗೃಹದೊಳಗೆ ಬರಮಾಡಿಕೊಂಡು ನಮಸ್ಕಾರಮಾಡಿ ಸತ್ಕರಿಸಿ ಉಚಿತಾಸನದಲ್ಲಿ ಕೂಡ್ರಿಸಿದನು. "ಅಮ್ಮಾ! ನೀವು ಇಲ್ಲಿಯವರಿಗೆ ಶ್ರಮಪಟ್ಟು ಬಂದಿರುವಿರಲ್ಲ! ಯಾರ ಸಂಗಡವಾದರು ಕರೆ ಕಳಿಸಿದರೆ ನಾನೇ ನಿಮ್ಮಲ್ಲಿಗೆ ಬರುತ್ತಿದ್ದೆ." ಯನಲು. ಕುಂತಿದೇವಿ "ನಿನ್ನನ್ನು ಕಾಣದೆ ಬಹುದಿನಗಳಾದವು. ನಿನ್ನನ್ನು ನೋಡುವ ಆಶೆಯಿಂದ ಬಂದೆನು. ಈಗ ನೀನು ನನಗೊಂದು ವಚನವನ್ನು ಕೊಡ ಬೇಕು ಪುತ್ರಾ!" ಎಂದು ಅತಿ ದುಃಖದಿಂದ ಪ್ರಾರ್ಥಿಸಿದಳು. ತಾಯಿಯ ಮಾತನ್ನು ಕೇಳಿದ ಕರ್ಣನು "ಅಮ್ಮ! ನಿನಗೆ ಅಂಥ ಸಂಕಟವೇನು ಬಂದಿದೆ? ನಿಮಗೆ ಒಳಿತಾಗುವದಾದರೆ ಇದೇ ನಿನ್ನಗೆ ವಚನವನ್ನೀಯುತ್ತೇನೆ. ನಿನ್ನ ಮಾತಿಗೆ ಎದುರಿಲ್ಲ. ಅದೇನು ಕೇಳು. ನಿನ್ನ ಆಪತ್ತೇನಿದೆ!" ಎಂದು ನುಡಿಯಲು ಕುಂತಿದೇವಿ "ವತ್ಸಾ! ನೀನು ಮುಂದೆ ಸಂಘಟಿತವಾಗುವ ಕುರು ಪಾಂಡವರ ಕಾಳಗದಲ್ಲಿ. ಅರ್ಜುನನ ಮೇಲೆ ತೊಟ್ಟಬಾಣವನ್ನು ಪುನಃ ತೋಡುವುದಿಲ್ಲವೆಂದು ನೀನು ನನಗೆ ಅಭಯ ಕೊಡಬೇಕು. ಇದರ ವಿನಃ ನಾನು ಮತ್ತೇನು ಬಯಸುವವಳಲ್ಲ." ಎಂದಳು ತಾಯಿಯ ಮಾತಿಗೆ ಕರ್ಣನು ನಕ್ಕು "ಇಷ್ಟೇ!

ಸೇನು ಬೇಡುವುದು! ಇಷ್ಟಕ್ಕೆ ಇಷ್ಟು ದೂರಶ್ರಮ ವಹಿಸಿ ಬರಬೇಕಾಯಿತೇ? ನನ್ನನು ಕರೆಯಿಸಿ ಹೇಳಿದ್ದರೆ ನಿನ್ನ ಮಾತನ್ನು ನಾನು ನಿರಾಕರಿಸುತ್ತಿರಲಿಲ್ಲ. ಆಯಿತು ನಿನ್ನ ಅಭೀಷ್ಟದಂತೆ ಆಗಲಿ, ಕೊಟ್ಟಬಾಣ ತೊಡುವುದಿಲ್ಲ. ಕರ್ಣನ ಅಭಯ ಪ್ರಧಾನಕ್ಕೆ ಸಂತಸಗೊಂಡು ಕುಂತಿದೇವಿ ಮಗನನ್ನು ಮನಸಾರ ಹರಿಸಿ ತನ್ನ ನಿವಾಸಕ್ಕೆ ತೆರಳಿದಳು.

ಯುದ್ಧದ ದಿನಗಳು ಸಮೀಪಿಸಿದಂತೆ ಎಲ್ಲರು ತಮ್ಮ ಯುದ್ಧಕ್ಕೆ ಬೇಕಾದ ಸಕಲ ಸನ್ನಾಹಗಳನ್ನು ಸಿದ್ಧಗೊಳಿಸುತ್ತಿದ್ದರು. ಮತ್ತು ಮಿತ್ರರಾಜರಿಗೆ ತಮ್ಮ ಸಹಾಯಕ್ಕೆ ಬರುವಂತೆ ಪತ್ರ ಬರೆದು ಎಲ್ಲರಿಗೂ ರಾಹುತರನ್ನು ಕಳಿಸಿ ತಿಳಿಸುತ್ತಿದ್ದರು. ಅಷ್ಟರಲ್ಲೆ ಯುದ್ಧದ ದಿನಗಳು ಬಂದೇ ಬಿಟ್ಟವು. ಎಲ್ಲರೂ ಯುದ್ಧ ಭೂಮಿಗೆ ಸನ್ನದ್ಧರಾಗಿ ಪ್ರಯಾಣ ಬೆಳೆಸಿದರು. ಯುದ್ಧ ಭೂಮಿಗೆ ಸ್ವಲ್ಪ ದೂರದಲ್ಲಿ ಒಂದು ಕಡೆ ಕೌರವರ ಸೈನ್ಯ ಮತ್ತೊಂದು ಕಡೆ ಪಾಂಡವರ ಸೈನ್ಯ ಬಿಡಾರವನ್ನು ಹಾಕಿದರು. ಬೆಳಿಗೆದ್ದರೆ ಯುದ್ಧದ ರಣರಂಗ ಪ್ರಾರಂಭವಾಗಲಿದೆ. ಎಲ್ಲಾ ಸರಂಜಾಮ ಸಿದ್ಧವಾಗಿತ್ತು. ಅಂದು ರಾತ್ರಿ ಕಳೆಯಿತು.

## ಯುದ್ಧ

ಅದೊಂದು ವಿಶಾಲವಾದ. ಭರತ ಖಂಡದಲ್ಲೆ ಅತಿಸುಪ್ರಸಿದ್ಧವಾದ ಯುದ್ಧಭೂಮಿ "**ಕುರುಕ್ಷೇತ್ರ**". ಕುರು ಪಾಂಡವರ ಒಟ್ಟು ಹದಿನೆಂಟು ಅಕ್ಷೋಹಿಣಿ ಸೈನ್ಯ ಧರಣಿಯ ಅಂಚಿನವರೆಗೂ ವ್ಯಾಪಿಸಿ, ಯುದ್ಧೋನ್ಮುಖರಾಗಿ ತಮ್ಮ ಅಧಿಕಾರಿಗಳ ಆಜ್ಞೆಗಾಗಿ ಕಾದಿರುವವರಂತೆ ಯುದ್ಧ ಸನ್ನದ್ಧರಾಗಿ ವಿವಿಧ ಮಾರಣಾಯುಧಗಳನ್ನು ಧರಿಸಿನಿಂತಿದ್ದಾರೆ. ಎರಡು ಬದಿಗಳಲ್ಲಿ.

ಅಷ್ಟರಲ್ಲೇ ನಾಲ್ಕು ಬಿಳಿಯ ಅಶ್ವಗಳನ್ನು ಕಟ್ಟಿದ ನವರತ್ನ ಖಚಿತವಾದ ಸುವರ್ಣ ರಥ ಅತಿವೇಗದಿಂದ ಬರುತ್ತಿರುವುದನ್ನು ಎರಡು ಬದಿಗಳ ಕುರು ಪಾಂಡವರ ಕಡೆಯ ಯುದ್ಧ ಯೋಧರು ನೋಡುತ್ತಿರುವಂತೆ ಉಭಯ ಸೈನ್ಯಗಳ ಮಧ್ಯ ಬಂದು ನಿಂತಿತು. ಅದರಲ್ಲಿ ಹದಿನಾಲ್ಕು ಭುವನಗಳನ್ನೇ ತನ್ನ ಉದರದಲ್ಲಿ ಧರಿಸಿರುವ ಪರಮಾತ್ಮನಾದ ಶ್ರೀಕೃಷ್ಣನು ರಥಚಾಲಕನಾಗಿರುವನು. ರಥದ ಮಧ್ಯದಲ್ಲಿ ಪಾಂಡವ ಮಧ್ಯಮನಾದ ಅರ್ಜುನನು ರಥಿಕನಾಗಿ ವಿರಾಜಿಸಿರುವನು. "ಹೇ! ಪರಮಾತ್ಮ!! ಸ್ವಲ್ಪ ರಥವನ್ನು ನಿಲ್ಲಿಸು! ನಮ್ಮೊಡನೆ ಯುದ್ಧಮಾಡಲು ಯಾವ ಯಾವ ಯೋಧರು ಬಂದಿರುವರೋ ಅವರನ್ನು ನೋಡಬೇಕೆಂಬ ಆಶೆ ನನಗಾಗಿದೆ. ದಯವಿಟ್ಟು ನಿಲ್ಲಿಸು." ಎಂದು ಅರ್ಜುನನು ಶ್ರೀ ಕೃಷ್ಣನನ್ನು ಪ್ರಾರ್ಥಿಸಿದನು. ಆತನ ಮಾತಿನಂತೆ ಶ್ರೀಕೃಷ್ಣನು ರಥವನ್ನು ಉಭಯ ಸೈನ್ಯಗಳ ಮಧ್ಯನಿಲ್ಲಿಸಿ. "ಅರ್ಜುನಾ! ನಿನ್ನ ವಾಮದಿಕ್ಕಿನಲ್ಲಿರುವ ಹನ್ನೊಂದು ಅಕ್ಷೋಹಿಣಿ ಸೈನ್ಯ ಕುರುಪತಿಯಾದ ದುರ್ಯೋಧನ ಸಾರ್ವಭೌಮನದಾಗಿದೆ. ಮತ್ತು ಬಲಕ್ಕೆ ನಿಮ್ಮ ಏಳಕ್ಷೋಹಿಣಿ ಸೈನ್ಯವಿದೆ. ನಿನ್ನ ಅಗ್ರಜನಾದ ಧರ್ಮರಾಯ ಮತ್ತು ಭೀಮಸೇನನು ಮುಂದೆನಿಂತಿರುವರು. ಅವರ ಹಿಂದೆ ನಿಮ್ಮವರ ರಥಗಳ ಹಿಂಭಾಗದಲ್ಲಿ, ನಿಮ್ಮ ಸೈನ್ಯಕ್ಕೆ ಸಾರಥ್ಯಮಾಡಲು ನಿನ್ನ ಆತ್ಮೀಯರನ್ನು ಹಿತವರ್ಗದವರು ತಮ್ಮ ತಮ್ಮ ರಥಗಳಲ್ಲಿ ಮುಂಡಿಸಿರುವರು ನೋಡು. ನಿಮ್ಮ ಸೈನ್ಯದ ಎದುರು ಗಡೆಯೇ ನಿಮ್ಮ ದೊಡ್ಡಪ್ಪನ ಮಕ್ಕಳ

ಸೈನ್ಯವಿದೆ. ದ್ರೋಣ, ಅಶ್ವಥ್ಥಾಮ, ಕೃಪಾಚಾರ್ಯರಾದಿಗಳು. ಮುಂದೆ ಭೀಷ್ಮಾದಿ ಮಹಾಯೋಧರು ಯುದ್ಧ ಸನ್ನದ್ಧರಾಗಿ ತಮ್ಮ ನಿವಾಸಗಳಲ್ಲಿ ಕುಳಿತಿದ್ದಾರೆ. ಅವರೆಲ್ಲರನ್ನು ಒಮ್ಮೆ ಮನಸಾರ ದಿಟ್ಟಿಸಿ ನೋಡು. ಆ ಮೇಲೆ ಅವರು ನಿನ್ನ ಕಣ್ಣಿಗೆ ಬೀಳುವದು ದುರ್ಲಭ" ಎಂದು ಅರ್ಜುನನಿಗೆ ಶ್ರೀ ಕೃಷ್ಣನು ಹೇಳಿದನು.

ಆಗ ಅರ್ಜುನನು ಎಲ್ಲಾ ಜನರನ್ನು ಕಂಡು "ಹೇ ಕೃಷ್ಣಾ! ಎಂಥಾ ವೈಪರೀತ್ಯ ಇದು. ಕಕ್ಕ, ದೊಡ್ಡಪ್ಪ, ಅಣ್ಣ ತಮ್ಮಂದಿರು, ಗುರುಗಳು, ಮಾವಂದಿರು, ಭಾವ, ಮೈದುನರು ಹೀಗೆ ಬಂಧು ವರ್ಗದವರನ್ನೆಲ್ಲಾ ಕೊಂದು ನಾನು ರಕ್ತದ ಕೂಳನ್ನು ತಿನ್ನಲೇ? ಇದಕ್ಕಿಂತ ಮಹ ಘೋರತನಯವಾದ ಪಾಪ ಮತ್ತೊಂದು ಇಲ್ಲವಲ್ಲ! ಸರ್ವಾಥಾ ಯುದ್ಧವನ್ನು ನಾನೀಗ ಮಾಡಲಾರೆ! ಅವರೇ ರಾಜ್ಯವನ್ನಾಳಲಿ," ಎಂದು ಧನುರ್ಬಾಣಗಳನ್ನು ರಥದಿಂದ ಕೆಳಗೆಸೆದನು.

**"ಯದಿ ಮಾಮ ಪ್ರತೀಕಾರಂ ಅಶಸ್ತ್ರಂ ಶಸ್ತ್ರಪಾಣಯಃ |**
**ಧಾರ್ತರಾಷ್ಟ್ರಾ ರಣೇಹನ್ಯುಃ ತೇನ್ಮೇ ಕ್ಷೇಮತರಂ ಭವೇತ್ ||**

"ಒಂದು ವೇಳೆ ಹೋರಾಡ ಬಯಿಸದೆ ನಿರಾಯುಧನಾಗಿ ನಿಂತ ನನ್ನನ್ನು ಆಯುಧ ಪಾಣಿಗಳಾದ ಕೌರವರು ಯುದ್ಧದಲ್ಲಿ ಕೊಂದರೆ ಅದು ನನಗೆ ಒಳ್ಳೆಯದೇ ಆದೀತು. "ಎಂದು ಅನೇಕ ವಿಧದಿಂದ ಯುದ್ಧವನ್ನು ಮಾಡುವುದಿಲ್ಲ ಎಂದು ಅರ್ಜುನನು ಶ್ರೀ ಕೃಷ್ಣನನ್ನು ಪ್ರಾರ್ಥಿಸಿದನು.

ಆ ವಿಧವಾಗಿ ಅತಿ ದುಃಖ ಪೂರಿತವಾದ ಪ್ರಾರ್ಥನೆಯನ್ನು ಕೇಳಿ ಶ್ರೀಕೃಷ್ಣನು ಅರ್ಜುನನೊಂದಿಗೆ "ಅರ್ಜುನಾ! ನೀನು ಈ ರೀತಿಯಾಗಿ ನಿರ್ಬಲನಂತೆ ದುಃಖಿಸುತ್ತ ಮಾತನಾಡುತ್ತಿರುವಿ! ಏನಿದು!

**ಕ್ಲೈಬ್ಯಂ ಮಾಸ್ಮ ಗಮಃ ಪಾರ್ಥ ನೈತತ್ ತ್ವಯ್ಯುಪ ಪದ್ಯತೇ |**
**ಕ್ಷುದ್ರಂ ಹೃದಯ ದೌರ್ಬಲ್ಯಂ ತ್ಯಕ್ತ್ವೋತ್ತಿಷ್ಠ ಪರಂತಪ || "**

ಶ್ರೀ ಕೃಷ್ಣನ ಮಾತಿಗೆ ಅರ್ಜುನ "ದೇವಾ! ನನ್ನಿಂದ ಪೂಜೆ ಕೊಳ್ಳುವದಕ್ಕೆ ಯೋಗ್ಯರಾದ ಭೀಷ್ಮ ದ್ರೋಣರನ್ನು ನಾನು ಯುದ್ಧದಲ್ಲಿ ಬಾಣಗಳಿಂದ ಹೇಗೆ ಹೊಡೆದು ಕೊಲ್ಲುವದು?" ಎಂದು ಹೇಳಿ ಪ್ರಾರ್ಥಿಸಲು ಪರಮಾತ್ಮನಾದ ಶ್ರೀಕೃಷ್ಣನು ಅರ್ಜುನನ್ನು ಕುರಿತು ಅದಕ್ಕೆ ಅನೇಕ ವಿಧವಾದ ವಾಕ್ಯಗಳನ್ನು ಹೇಳಿ ಉಪದೇಶಮಾಡಿದನು (ಗೀತೋಪದೇಶ). ಆದರೂ ಸಂಪೂರ್ಣವಾಗಿ ಮನಸ್ಸನ್ನು ಅರ್ಜುನನು ತನ್ನ ಸ್ವಾಧೀನ ಪಡಿಸಿಕೊಳ್ಳಲಿಲ್ಲವೆಂದು ತಿಳಿದ ಶ್ರೀಹರಿಯು ಗೀತೆಯ ಹನ್ನೊಂದನೇ ಅಧ್ಯಾಯವೆನಿಸಿದ "ವಿಶ್ವರೂಪವನ್ನು ಉಪದೇಶ ಮಾಡಬೇಕೆಂದು ನಿಶ್ಚಯಿಸಿ, "ಅರ್ಜುನ! ನಾನು ಯುದ್ಧಕ್ಕಾಗಿ ಇಲ್ಲಿಗೆ ಬಂದವರಲ್ಲಿ ಕೆಲವರನ್ನು ಮಾತ್ರ ಬಿಟ್ಟು ವುಳಿದ ದುಷ್ಟರನ್ನೆಲ್ಲಾ ಕೊಂದಿರುವೆನು. ಆದ ಕಾರಣ ತಿರುಗಾಡುತ್ತಿರುವ ಶವಗಳನ್ನು ಮಾತ್ರ ನೀನು ಕೊಂದು, ಅರ್ಜುನನು ಕೌರವರನ್ನು ಕೊಂದ" ನೆಂಬ ಕೀರ್ತಿಪಡೆಯುವದೇ ನನ್ನ ಆಶಯ. ಅದು ಹೇಗೆ ಎಂದು ಕೇಳುವೆಯಾದರೆ ಈಗ ನೀನೆ ಕಣ್ಣಾರೆ ಕಾಣುವೆಯಂತೆ. ಆದರೆ ಈ ನಿನ್ನ ದೃಷ್ಟಿಯಿಂದ

ನೋಡಲಸಾಧ್ಯ, ಅದಕ್ಕಾಗಿ ನಿನಗೆ ದಿವ್ಯದೃಷ್ಟಿಯನ್ನು ಪ್ರಾಸಾದಿಸುವೆ" ಎಂದು ತನ್ನ ನಿಜ ಸ್ವರೂಪವನ್ನು ತೋರಿಸಿದನು. ಪರಮಾತ್ಮನು ಪ್ರಾಸಾದಿಸಿದ ದೃಷ್ಟಿಯ ಪ್ರಭಾವದಿಂದ ಯುದ್ಧಭೂಮಿಯಲ್ಲಿದ್ದ ಶತೃಸೈನ್ಯವೆಲ್ಲಾ ಶ್ರೀಹರಿಯ ಉದರವನ್ನು ತಳಮಳಿಸುತ್ತ, ಅಳುತ್ತ, ಹೋರೆಂದು ಗೋಳಾಡುತ್ತ ವೇಗದಿಂದ ಪ್ರವೇಶಿಸುತ್ತಿರುವರು. ಕೆಲವರು ಕ್ರೂರವಾದ ಹಲ್ಲುಗಳ ಸಂದುಗಳಲ್ಲಿ ಸಿಕ್ಕಿಬಿದ್ದು ಒದ್ದಾಡುತ್ತಿರುವದನ್ನೆಲ್ಲಾ ಕಣ್ಣಾರೆ ಕಂಡು ಅರ್ಜುನನು ಆ ವಿಚಿತ್ರವಾದ ಎಲ್ಲರಿಗೂ ನೋಡಲು ಸಾಧ್ಯವಾಗದ, ಭೀಕರವಾದ ರೂಪವನ್ನು ಕಂಡು ಗಡಗಡನೆ ನಡುಗಿ, ಹೇ ಪ್ರಭೂ! ಸಾಕು ಮಾಡು, ಈ ನಿನ್ನ ರೂಪವನ್ನು ನಾನು ನೋಡಲಾರೆ" ಎಂದು ಪ್ರಾರ್ಥಿಸಿದನು. ಆಗ ಶ್ರೀ ಕೃಷ್ಣನು ತನ್ನ ಮೊದಲಿನ ನಾಲ್ಕು ಹಸ್ತಗಳಲ್ಲಿ ಶಂಖ, ಚಕ್ರಗದಾ ಪದ್ಮಗಳಿಂದ ಹಸನ್ಮುಖನಾಗಿ, ಅರ್ಜುನಾ! ಬೇರೆ ಯಾರೂ ಎಂದು ಕಂಡಿರದ, ಬೆಳಕಿನಿಂದ ತುಂಬಿದ ಎಲ್ಲಕ್ಕು ಕಾರಣವಾದ ನನ್ನ ಈ ಅನಂತವಾದ ಹರಿಯ ವಿಶ್ವರೂಪವನ್ನು ನಾನು ನನ್ನ ಸಾಮರ್ಥ್ಯದಿಂದ ನಿನ್ನ ಮೇಲೆ ಅನುಗ್ರಹಿಸಿ ತೋರಿಸಿದೆನು.

ಎಷ್ಟು ಮಾತ್ರವೂ ನೋಡಲ ಸಾಧ್ಯವಾಗದ ನನ್ನ ಈ ರೂಪವನ್ನು ನೋಡಿದೆಯಲ್ಲಾ! ಇದನ್ನು ದೇವತೆಗಳು ಕೂಡ ನೋಡಬೇಕೆಂದು ಸದಾ ಹಾತೊರೆಯುತ್ತಾರೆ. ನನ್ನನ್ನು ಯಾವ ರೂಪದಿಂದ ನೋಡಿದೆಯೋ ಆ ಬಗೆಯಲ್ಲಿ ವೇದಗಳ ಅಧ್ಯಯನ ಮಾಡಿದವರೂ, ಉಪವಾಸ ವ್ರತವನ್ನು ಮಾಡಿದರೂ, ದಾನ ಯಜ್ಞಾದಿಗಳನ್ನು ಮಾಡಿದವರು ಸಹಕಾಣಲಾರರು. ಅರ್ಜುನಾ! ಯಾವನು ನನಗೆ ಪ್ರಿತಿಯಾಗುವ ಕಾರ್ಯವನ್ನು ಮಾಡುವನೋ, ನಾನೆ ಗತಿಯಂದು ತಿಳಿಯುವನೋ ನನ್ನನ್ನೇ ಭಜಿಸುವನೋ, ಹೊರಗಿನ ವಿಷಯಗಳಲ್ಲಿ ಆಸಕ್ತಿ ಇಲ್ಲದಿರುವನೋ, ಯಾವ ಪ್ರಾಣಿಗಳಲ್ಲೂ ಹಗೆತನ ವಿಲ್ಲದಿರುವನೋ, ಅವನು ನನ್ನನೇ ಪಡೆಯುತ್ತಾನೆ.

ಈಗ ನಿನಗೆ ಪೂರ್ಣವಾಗಿ ಜ್ಞಾನ ಉದಯವಾಯಿತು. ಧನುರ್ಬಾಣಗಳನ್ನು ಹಿಡಿದು ಯುದ್ಧಮಾಡು "ಶತೃಗಳನ್ನು ಕೊಂದರೆ ಪಾಪವಿಲ್ಲ. ಲೋಕ ಕಲ್ಯಾಣವಾಗುವದು, ಎದ್ದೇಳು" ಎಂದು ಅರ್ಜುನನನ್ನು ಜಾಗೃತನಾಗುವಂತೆ ಮಾಡಿ ಆತನಿಂದ ಶತೃಸಂಹಾರ ಮಾಡಿಸಿದನು. ಯುದ್ಧ ಮಾಡುತ್ತಿರುವಾಗ ಕರ್ಣನು ಅರ್ಜುನನನ್ನು ಕೊಲ್ಲಲು ಮುಂದೆ ಬಂದು ರಥವನ್ನು ನಿಲ್ಲಿಸಿ ಬಾಣಗಳನ್ನು ಪ್ರಯೋಗಿಸುವಾಗ ಅದನ್ನರಿತ ಶ್ರೀಕೃಷ್ಣನು ಕರ್ಣನು ಬಿಡುತ್ತಿರುವ ಸರ್ಪಾಸ್ತ್ರವನ್ನು ಸರಿಯಾಗಿ ಅರ್ಜುನನಿಗೆ ಗುರಿಯಿಟ್ಟಿರುವುದನ್ನು ಕಂಡು ತನ್ನ ರಥವನ್ನು ಭೂಮಿಯೊಳಗೆ ಕುಸಿದು ಹೋಗುವಂತೆ ಮಾಡಿದನು. ಕರ್ಣನು ಬಿಟ್ಟ ಸರ್ಪಾಸ್ತ್ರ ತಪ್ಪಿ ಅರ್ಜುನನ ಕಿರೀಟವನ್ನು ಮಾತ್ರ ತೆಗೆದುಕೊಂಡು ಹೋಯಿತು. ಸರ್ಪಾಸ್ತ್ರ ತಿರುಗಿ ಬಂದು ಕರ್ಣನನ್ನು ಬಹು ವಿಧದಿಂದ ಪುನಃ ಹೂಡಲು ಬೇಡಿಕೊಂಡಿತು. ಅದಕ್ಕೆ ತಾಯಿಗೆ ಕೊಟ್ಟ ಮಾತಿಗೆ ಎದುರಿಲ್ಲವೆಂದು ಹೇಳಿದನು. ಆ ಬಾಣ ಹಿಂದಕ್ಕೆ ಹೋಯಿತು. ಅರ್ಜುನನ ಬಾಣ ಒಂದು ವೇಗದಿಂದ ಬಂದು ಕರ್ಣನ ರಥದ ಗಾಲಿಯನ್ನು ಕುಸಿದು ಹೋಗುವಂತೆ ಮಾಡಿತು. ಅದನ್ನು ಕರ್ಣನು ಎತ್ತುತ್ತಿರಲು ಶ್ರೀ ಕೃಷ್ಣನ ಅಪ್ಪಣೆಯಂತೆ ಅರ್ಜುನನು ಬಾಣದಿಂದ ಕರ್ಣನನ್ನು ಹೊಡೆದು ಕೊಂದನು. ಕೌರವರೆಲ್ಲ ನಾಶವಾದರು. ಪಾಂಡವರಿಗೆ ಜಯವಾಯಿತು.

ಧರ್ಮರಾಜನಿಂದ, ಅಶ್ವಮೇಧ, ರಾಜಸೂಯಾದಿ ಮಹಾ ಯಾಗಾದಿಗಳನ್ನು ತಾನುನಿಂತು ಸಾಂಗೋಪಾಂಗಾವಾಗಿ ಶ್ರೀ ಕೃಷ್ಣನು ನೆರವೇರಿಸಿದನು. ಇನ್ನು ಮುಂದೆ ಧರ್ಮರಾಜನ ಧರ್ಮ ಪಾಲನೆ ಸುಖ ಸಂತೋಷಗಳಿಂದ ಸಾಗುತ್ತಿರಲು ಒಂದಾನೊಂದು ದಿನ ಭೀಮಸೇನನು ಒಬ್ಬನೇ ಏಕಾಂತದಲ್ಲಿ ಕುಳಿತಿರಲು, ಅಣ್ಣನ ಮೇಲೆ ಗೌರವದಿಂದ ಅರ್ಜುನನು ಆತನ ಬಳಿ ಹೋಗಲು ಸಂದೇಹಿಸುತ್ತಿರಲು ಅದನ್ನು ಕಂಡು ಭೀಮಸೇನನು "ಅರ್ಜುನಾ! ಏಕೆ ಅಲ್ಲೇನಿಂತಿರುವೆ! ಬಾ!" ಎಂದು ಕರೆಯಲು ಗೌರವದಿಂದ ಶಿರಬಾಗಿ ತನ್ನ ಸಂದೇಹವನ್ನು "ಅಣ್ಣಾ ನನಗೆ ಯುದ್ಧ ಭೂಮಿಯಲ್ಲಿ ಶ್ರೀಕೃಷ್ಣನು ಭೋಧಿಸಿದ ಮಾತುಗಳನ್ನು ಇನ್ನೊಮ್ಮೆ ಕೇಳಬೇಕೆಂದು ನನ್ನ ಮನ ಬಯಸುತ್ತಿರುವದು. ಆ ಮಾತುಗಳೆಲ್ಲ ಸಂಪೂರ್ಣವಾಗಿ ನಿಮಗೆ ನೆನಪಿರಬಹುದು. ಮತ್ತೊಮ್ಮೆ ತಿಳಿಸುವಿರಾ ಸಂಬಂಧ ಹಚ್ಚಬೇಕು !" ಎಂದು ಕೇಳಿದನು. ಆಗ ಭೀಮಸೇನನು ಹಸನ್ಮುಖನಾಗಿ "ಏಕೆ1 ನಿನಗೇನೂ ನೆನಪಿಲ್ಲವೇ! ಇಷ್ಟು ಶಿಘ್ರದಲ್ಲೆ ಮರೆತು ಬಿಟ್ಟೆಯಾ! ಆದರೆ ಅದೇಕೆ ಈಗ ನೆನಪಾಯಿತು! ಶ್ರೀ ಕೃಷ್ಣನ ವಿಲಕ್ಷಣ ಪುರುಷನಾದ ಶ್ರೀ ಹರಿಯ ನೆನಪಾಯಿತೇ! ಆತನಿಲ್ಲದಿದ್ದರೆ ನಾವುಗಳು ಎಷ್ಟು ಘೋರತರವಾದ ತಪ್ಪುಗಳನ್ನುನುಭವಿಸ ಬೇಕಾಗಿತ್ತೋ ತಿಳಿಯದು. ಶ್ರೀಹರಿಯಾದ ಯಾದವೇಂದ್ರನ ಅವತಾರ ಜನ್ಮ ಜನ್ಮಕ್ಕೂ ಮರೆಯುವಹಾಗಿಲ್ಲ. ಆದರೆ ಆ ವಿಷಯ ನಿನಗೆ ಪುನಃ ಜ್ಞಪ್ತಿಗೆ ಬಂದದ್ದು ನಮ್ಮೆಲ್ಲರ ಕ್ಷೇಮವೇ ಎಂದು ನಾವು ಭಾವಿಸುತ್ತೇನೆ, ಸಮಯ ಬಂದಾಗ ನಾನು ವಿವರವಾಗಿ ತಿಳಿಸುವೆನು. ಈಗ ನನಗೆ ಬಿಡುವಿಲ್ಲ ಬೇರೇ ಏನು ತಿಳಿಯಬೇಡ" ಎಂದು ನುಡಿದ ಭೀಮಸೇನನ ಮಾತಿಗೆ ಸಮ್ಮತಿ ಪಟ್ಟು ಅಲ್ಲಿಂದ ಅರ್ಜುನನು ಹೋರಟು ಹೋದನು.

ಅಣ್ಣನಾದ ಭೀಮಸೇನನು ಯಾವುದೋ ಯೋಚನೆಯಲ್ಲಿ ಮಗ್ನನಾಗಿರುವುದನ್ನು ತಿಳಿದ ಅರ್ಜುನನು ಮತ್ತೇನೋ ಯೋಚಿಸುತ್ತ ತನ್ನದೇ ಆದ ಕಕ್ಷಕ್ಕೆ ಹೋದನು. ಆಮೇಲೆ ಅರ್ಜುನನು ಅಣ್ಣನ ಹತ್ತಿರಕ್ಕೆ ಹೋಗಲಿಲ್ಲ. ಭೀಮಸೇನನು ತಮ್ಮನನ್ನು ಕರೆಯಲಿಲ್ಲ. ಹೀಗಾಗಿ ಸುಮಾರು ಕೆಲವು ಸಾವಿರಾರುವರ್ಷಗಳ ನಂತರ ಪುನಃ ಅಣ್ಣ ತಮ್ಮಂದಿರ ಪುನರ್ಮಿಲನ, ಬೇರೇ ಬೇರೆ ಅವತಾರಗಳಲ್ಲಿ ಆಗುವದು.

|| ಓಂ ಶ್ಯಾಂತಿಃ ಶ್ಯಾಂತಿಃ ಶ್ಯಾಂತಿಃ ||

ಶ್ರೀ ಮಧ್ವಪತಿಯೇ ನಮಃ

# ಶ್ರೀ ವಾಸುದೇವನ ಜನನ

ಸುಮಾರು ಎಂಟನೇ ಶತಮಾನದಲ್ಲಿ ರಜತ ಪುರಕ್ಕೆ ಹತ್ತಿರವೆ ಇದ್ದ ಪಾಜಕಾ ಕ್ಷೇತ್ರವೆಂಬ ಪುಟ್ಟ ಗ್ರಾಮ. ಒಂದು ವಿಧವಾಗಿ ಆ ಗ್ರಾಮದಲ್ಲಿ ಬ್ರಾಹ್ಮಣರ ಸಂಖ್ಯೆ ಹೆಚ್ಚಾಗಿರುವುದರಿಂದ ಅಗ್ರಹಾರದಂತೆ ಗೋಚರಿಸುತ್ತಿತ್ತು. ಅಲ್ಲಿ ಸರ್ವದಾ ಪೂಜಾದಿ ಕಾರ್ಯಕ್ರಮಗಳು ದೇವಾಲಯಗಳಲ್ಲಿ ಹೆಚ್ಚಾಗಿ ಶಾಸ್ತ್ರೋಕ್ತವಾಗಿ ನಡೆಯುತ್ತಿದ್ದವು. ವಿದ್ಯಾರ್ಥಿಗಳಿಗೆ ಪಾಠ ಪ್ರವಚನಾದಿ ಭೋಧನಾತ್ಮಕವಾದ ಕಾರ್ಯಗಳು ಹೆಚ್ಚು. ಮತ್ತು ಸದಾ ಪಂಡಿತೋತ್ತಮರ ಮುಖದಿಂದ ವೇದಗಳ ಘೋಷಣೆ ನಡೆಯುತ್ತಿತ್ತು.

ಅಂಥಾ ಸದ್ಬ್ರಾಹ್ಮಣರಲ್ಲಿ " ನಡು ಮನೆ" ಯೆಂಬ ಬ್ರಾಹ್ಮಣನ ಮನೆಯೊಂದಿತ್ತು. ಬಡ ಕುಟುಂಬದವರು ಬೇಸಾಯ ಮಾಡಿ ಹೊಟ್ಟೆ ತುಂಬಿ ಕೊಳ್ಳುತ್ತಿದ್ದರು. ಆ ಕಾಲಕ್ಕೆ ಸರಿಯಾಗಿ ಹೊಲಗಳಿಗೆ ಸಾಕಷ್ಟು ನೀರಿನ ಸೌಲಭ್ಯವಿಲ್ಲ. ಮಳೆ ಬಂದರೆ ಬೆಳೆ ಇಲ್ಲದಿದ್ದಲ್ಲಿ ನಾನಾ ಕಷ್ಟಪಟ್ಟು ಉದರ ಪೋಷಣವನ್ನು ಸಾಗಿಸುತ್ತಿದ್ದರು. ಮನೆಯ ಯಜಮಾನನಿಗೆ ಬಹಳ ಕಾಲ ಕಳೆದು ಹೋದನಂತರ ಒಂದು ಗಂಡು ಸಂತಾನವಾಯಿತು. ಶಾಸ್ತ್ರಪ್ರಕಾರ ನಾಮಕರಣವನ್ನು ನೇರವೇರಿಸಿದರು. ಅವನಿಗೆ "ವಾಸುದೇವನೆಂದು" ಹೆಸರಿಟ್ಟರು. ಕೆಲವು ದಿನಗಳಾ ನಂತರ ಬೆಳೆಯುತ್ತ ಬೆಳೆಯುತ್ತ ನಡೆಯಲಾರಂಭಿಸಿದನು. ಈ ರೀತಿಯಾಗಿ ಅವನ ಆಟ ಪಾಟಗಳಿಂದ ನಡುಮನೆ ದಂಪತಿಗಳು ಬಹು ಆನಂದದಿಂದ ಕಾಲ ಕಳೆಯುತ್ತಿದ್ದರು. ಹೀಗಿರುವಾಗ ಒಂದು ದಿನ ಆತನ ಬೇಸಾಯಕ್ಕಾಗಿ ಒಂದು ಎತ್ತು ಬೇಕಾಗಿ ಒಬ್ಬ ಸಾಹುಕಾರನ ಹತ್ತಿರ ಹೋಗಿ ತನ್ನ ಬೇಸಾಯಕ್ಕೆ ಒಂದು ಎತ್ತು ಬೇಕೆಂದು ಕೇಳಿದನು. ಆಗ ಸಾಹುಕಾರನು ಸ್ವಲ್ಪ ಸಂಕೋಚಪಟ್ಟು ಆ ಮೇಲೆ ಎತ್ತನ್ನು ಕೊಟ್ಟು ಆ ಬ್ರಾಹ್ಮಣನನ್ನು ಕಳಿಸಿಕೊಟ್ಟನು.

ಹೊಸ ಎತ್ತು ಬಂದ ನಂತರ ಬ್ರಾಹ್ಮಣನ ಬೇಸಾಯ ನಿರಾತಂಕವಾಗಿ ಸಾಗಿತು. ಕೆಲವು ತಿಂಗಳವರೆಗೆ ಸ್ವಲ್ಪ ಕಷ್ಟಗಳಿಂದ ಚೇತರಿಸಿ ಕೊಳ್ಳುವಷ್ಟರಲ್ಲೆ ಸಾಹುಕಾರನು ಎತ್ತನ್ನು ಸಾಲವಾಗಿ ಕೊಟ್ಟಿದ್ದ ಕಾರಣ ಎತ್ತಿಗಾಗಿ ಬರತಕ್ಕ ಹಣವನ್ನು ಕೇಳಲು ಬಂದನು. ಸಾಹುಕಾರನನ್ನು ಬ್ರಾಹ್ಮಣನು ನೋಡಿ ಇನ್ನು ಕೆಲವು ಕಾಲ ತಡೆಯಲು ನಮ್ರತೆಯಿಂದ ಮನವಿ ಮಾಡಿಕೊಂಡನು. ಆದರೆ ಸಾಹುಕಾರನಿಗೆ ಎಳ್ಳಷ್ಟು ಕನಿಕರ ಹುಟ್ಟಲಿಲ್ಲ. ಕೋಪದಿಂದ ಬ್ರಾಹ್ಮಣನನ್ನು ಹಿಂಸೆಯ ಪಾಲು ಮಾಡಬೇಕೆಂದು ಯೋಚಿಸಿ ತನ್ನ ಸಂಗಡ ಬಂದ ಆಳಿನ ಕೈಯಿಂದ ಒಂದು ದೊಡ್ಡ ಬಂಡೆಕಲ್ಲನ್ನು ಬ್ರಾಹ್ಮಣನ ತಲೆಯ ಮೇಲಿರಿಸಿ ಬಿಸಿಲಿನಲ್ಲಿ ನಿಲ್ಲಿಸಿದನು. ಸ್ವಲ್ಪ ಹೊತ್ತು ಕಳೆದ ನಂತರ

ಬ್ರಾಹ್ಮಣನ ಪತ್ನಿ ತನ್ನ ಪತಿ ಊಟಕ್ಕೆ ಬಾರದ ಕಾರಣ ಮಗುವನ್ನು ತಂದೆಯವರು ಊಟಕ್ಕೆ ಬಂದಿಲ್ಲ. ಸಾಹುಕಾರನ ಮನೆಗೆ ಹೋಗಿ ಕರೆದು ಕೊಂಡು ಬರಲು ಕಳಿಸಿದಳು. ವೇಗವಾಗಿ ಓಡುತ್ತಾ ಮಗು ಸಾಹುಕಾರನ ಮನೆ ತಲುಪಿ ತಂದೆಯನ್ನು ಊಟಕ್ಕೆ ಬಾರೆಂದು ಕರೆಯಲು ಮಗುವಿನ ತಂದೆ, ಮಗನನ್ನು ಕಂಡು "ಮಗು ಸಾಹುಕಾರನಿಗೆ ನಾನು ಹಣ ಕೊಡಬೇಕು, ಹಣ ಕೊಡದೆ ಸಾಹುಕಾರನು ಬಿಡುವುದಿಲ್ಲಪ್ಪಾ. ನೀನು ಹೋಗಿ ಊಟ ಮಾಡು ಮಗೂ" ಎಂದು ತಂದೆ ಹೇಳಲು ಮಗು ಮನಿಗೆ ಬಂದು ಹಿತ್ತಲಲ್ಲಿ ಬಿದ್ದಿದ ಹುಣಿಸೆ ಬೀಜಗಳನ್ನು ತನ್ನ ಉಡಿಯಲ್ಲಿ ತುಂಬಿ ಕೊಂಡು ಸಾಹುಕಾರನ ಮನೆಗೆ ಹೋಗಿ ಸಾಹುಕಾರರೇ ನಿಮ್ಮ ಹಣ ತೆಗೆದು ಕೊಳ್ಳಿ, ಇನ್ನು ಹೆಚ್ಚಿಗೆ ತಂದಿರುವೆನು" ಎಂದು ಹೇಳಿ ಆ ಬೀಜಗಳನ್ನು ಅವನ ಮನೆಯ ಮುಂದಿರುವ ಬಂಡೆಯ ಮೇಲೆ ಹಾಕಿದನು. ಆಗ ಸಾಹುಕಾರನು ಮಗುವಿನ ಹತ್ತಿರಕ್ಕೆ ಬಂದು ನೋಡಲು, ಅವನ ಕಣ್ಣಿಗೆ ಹುಣಿಸೆ ಬೀಜಗಳು ಬಂಗಾರದ ನಾಣ್ಯಗಳಂತೆ ಕಂಡು ಬಂದವು. ಅವುಗಳನ್ನು ಕಂಡು ಸಂತೋಷದಿಂದ ತನ್ನ ಉಡಿಗೆ ಹಾಕಿಕೊಳ್ಳುತ್ತ ತನ್ನ ಮನುಷ್ಯರ ಕೂಡ ಬ್ರಾಹ್ಮಣ ತಲೆ ಮೇಲಿದ್ದ ಕಲ್ಲನ್ನು ಇಳಿಸಿದನು. ಸಾಹುಕಾರನು ಬ್ರಾಹ್ಮಣನನ್ನು ಕಂಡು "ಸ್ವಾಮೀ ಈಗ ನಿಮ್ಮ ಸಾಲವೆಲ್ಲ ಮುಟ್ಟಿತು. ನಿಮ್ಮ ಮಗುವು ತಂದು ಕೊಟ್ಟನು. ಇನ್ನು ತಾವು ನಿಮ್ಮ ಮನೆಗೆ ಹೋಗಬಹುದು ಎಂದು ನುಡಿದನು. ಬ್ರಾಹ್ಮಣನು ತನ್ನ ಮಗನನ್ನು ಎತ್ತಿ ಕೊಂಡು ಗಾಬರಿಗೊಂಡವನಂತೆ ನಡುಗುತ್ತ ಶಿಶುವನ್ನು ಮುದ್ದಾಡುತ್ತ ಸಂತೋಷದಿಂದ ಮನೆಗೆ ಬಂದು ತನ್ನ ಪತ್ನಿಗೆ ನಡೆದ ವಿಚಾರವನ್ನು ತಿಳಿಸಿದನು. ಆಗ ದಂಪತಿಗಳ ಆನಂದ ವರ್ಣನಾತೀತವಾಗಿತ್ತು ಆ ಗ್ರಾಮದಲ್ಲಿರುವ ಪಂಡಿತರು, ಬ್ರಾಹ್ಮಣರು, ಮತ್ತಿತರರೂ ಬಂದು ಮಗುವನ್ನು ಕಂಡು "ಸ್ವಾಮೀ ತಮ್ಮ ಈ ಬಾಲಕನು ದೊಡ್ಡವನಾದ ಮೇಲೆ ಬಹು ದೊಡ್ಡ ಕೀರ್ತಿ ಪ್ರತಿಷ್ಠೆ ಪಡೆಯುವನು. ಈತನು ಸಾಮಾನ್ಯ ಬಾಲಕನಲ್ಲ! ಇದೇ ನೋಡಿ ಎಲ್ಲೊ ಮೂಲೆಗೆ ಬಿದ್ದ ಹುಣಸೆ ಬೀಜಗಳು ಇಂದು ಈತನ ಹಸ್ತ ಸೋಕಿದ ಮಾತ್ರದಲ್ಲಿ, ಬಂಗಾರದ ನಾಣ್ಯಗಳಾದವು. ಮುಂದೆ ಈ ಬಾಲಕನು ದೇಶಕ್ಕೆ ಅಧಿಪತಿಯಾಗುವನು! ಎಳ್ಳಷ್ಟು ಸಂದೇಹ ಬೇಡ. ಈ ಐದು ವರ್ಷದ ಬಾಲಕನೇ ಇಂಥಾ ಮಹತ್ತರವಾದ, ಯಾರಿಗೂ ಸಾಧ್ಯವಾಗದ, ಕೆಲಸವನ್ನು ಮಾಡಿ ತೋರಿಸಿದ" ನೆಂದು ಹೊಗಳುತ್ತ ತಮ್ಮ ತಮ್ಮ ಮನೆಗಳಿಗೆ ತೆರಳಿದರು. ಬ್ರಾಹ್ಮಣನ ಮನೆ ಮುಂದೆ ಒಂದು ಚಿಕ್ಕ ಜಾತ್ರೆಯಂತೆ ಕಾಣುತ್ತಿತ್ತು. ಸ್ವಲ್ಪ ಹೊತ್ತಿನಲ್ಲೆ ಎಲ್ಲರು ತಮ್ಮ ಮನೆಗಳಿಗೆ ಹೋದರು.

ಹೀಗಿರುವಾಗ ಬಾಲಕನೊಂದು ದಿನ ತನ್ನ ಮನೆಯ ಮುಂದಿನ ಎತ್ತಿಗೆ ಹುಲ್ಲು ದಾಣೆಗಳನ್ನು ತನ್ನ ಕೈಯಲ್ಲೇ ಹಿಡಿದು ಕೊಂಡು ತಿನಿಸಿದನು. ಅವನ ಕೈಯಿಂದ ಬಹು ಸಂತೋಷದಿಂದ ತಿನ್ನಹತ್ತಿತು. ಅದೇ ರೀತಿ ಪ್ರತಿನಿತ್ಯ ಬಾಲಕನು ತಿನಿಸುತ್ತಿದ್ದನು.

ಈ ರೀತಿಯಾಗಿ ಅವರಿಬ್ಬರಲ್ಲಿ ಅಮಿತವಾದ ಸ್ನೇಹಾ ಬೆಳೆಯಿತು. ಮುಂದೆ ಬಾಲಕನೇ ಬಂದು ತಿನಿಸಿದರೇ ತಿನ್ನಬೇಕು. ಅವನಿಲ್ಲದಿದ್ದಲ್ಲಿ ಯಾರು ಏನು ಕೊಟ್ಟರೂ ತಿನ್ನುತ್ತಿರಲಿಲ್ಲ ಈ ವಿಧದ ಸ್ನೇಹ ಅಮೋಘವಾಗಿತ್ತು. ಪ್ರತಿದಿನ ಬಾಲಕನು ಎತ್ತಿನ ಮೈ ಸವರುವದು. ನೀರು ಕುಡಿಸುವದು, ಎಲ್ಲರೂ ಅವನ ಪುಟ್ಟ ಪುಟ್ಟ ಕೈಗಳಿಂದ ಎತ್ತಿನ ಪರಾಮರಿಕೆಯನ್ನು ಬಾಲಕನು

ಮಾಡುತ್ತಿರುವದನ್ನು ಕಂಡು ಸಂತೋಷ ಪಡುತ್ತಿದ್ದರು.

ಒಂದಾನೊಂದುದಿನ ಪ್ರಾತಃ ಕಾಲದಲ್ಲೇ ವಾಸುದೇವನ ತಂದೆ ಪಶುಗಳನ್ನು ಅಡಿವಿಗೆ ಮೇಯಲು ಬಿಟ್ಟು, ಕಸಗುಡಿಸುತ್ತಿರುವಾಗ, ಬಾಲಕನು ಎತ್ತು ಅಡಿವಿಗೆ ಹೋಗುವುದನ್ನು ಕಂಡು ಅದರ ಹಿಂದೆ ಅದರ ಬಾಲವನ್ನು ಕೈಗಳಿಂದ ಹಿಡಿದು ಕೊಂಡು ನೇತಾಡುತ್ತ ಅಡಿವಿಗೆ ಹೋರಟನು. ಆಗ ಅವನನ್ನು ಮನೆಯವರು ಯಾರು ನೋಡಲಿಲ್ಲ. ಸ್ವಲ್ಪ ಹೊತ್ತಾದ ಬಳಿಕ ಬಾಲಕನಿಗೆ ಸ್ನಾನಮಾಡಿಸುವದಕ್ಕೆ ತಾಯಿ ಬಾಲಕನನ್ನು ಕೂಗಿದಳು. ಅವನು ಮನೆಯಲ್ಲಿರಲಿಲ್ಲ. ಮನೆಯ ಹೊರಗೆ ಬಂದು ಕರೆದಳು, ಅಲ್ಲಿ ಇಲ್ಲಿ. ಮನೆಯಿಂದ ಹೊರಗೆ ನೋಡಿ ಬಂದಳು. ಆದರೂ ಪ್ರಯೋಜನ ಇರಲಿಲ್ಲ. ತನ್ನ ಪತಿಯನ್ನು ಕರೆದು ಬಾಲಕನ ಸುಳಿವು ಎಲ್ಲಿಯೂ ಇಲ್ಲವೆಂದು ತಿಳಿಸಿದಳು. ಗಾಬರಿಗೊಂಡ ಬಾಲಕನ ತಂದೆ ಊರೆಲ್ಲಾ ಹುಡುಕುವದಾಯಿತು. ಅವನ ಸುಳಿವೇ ತಿಳಿಯಲಿಲ್ಲ. ತಂದೆತಾಯಿಗಳು ಬಾವಿ, ಕೆರೆಗಳಲ್ಲಿ ನೋಡಿ ಬಂದರು ಏನೂ ಅರ್ಥವಾಗಲಿಲ್ಲ. ಸಂಜೆಯವರೆಗೂ ರೋಧಿಸುತ್ತ ಕುಳಿತರು. ಗ್ರಾಮದ ಜನರು ಬಂದು ತಮಗೆ ತೋಚಿದ ಹಾಗೆ ಸಮಾಧಾನ ಪಡಿಸುತ್ತಿದ್ದರು. ಪೂರ್ಣ ಸಂಜೆಯಾಗಿ ಕತ್ತಲಾಗುತ್ತಿದಂತೆ ಎತ್ತಿನ ಬಾಲವನ್ನು ಹಿಡಿದು ತೂಗುತ್ತ ಬಾಲಕನ ಸಹಿತ ಎತ್ತು ಬಂದು ಅದನ್ನು ಕಟ್ಟುವ ಸ್ಥಾನಕ್ಕೆ ಬಂದು ನಿಂತಿತು. ಅದರ ಬಾಲವನ್ನು ಹಿಡಿದು ನೇತಾಡುತ್ತಿರುವ ಬಾಲಕನನ್ನು ಅವನ ತಂದೆ ತಾಯಿಗಳು ನೋಡಿ ಅಮಿತಾನಂದದಿಂದ ಬಿಗಿದಪ್ಪಿ ಕೊಂಡು ಕಣ್ಣೀರು ಸುರಿಯುತ್ತಿರಲು, "ಕಂದಾ! ಎಲ್ಲಿಗೆ ಹೋಗಿದ್ದಪ್ಪಾ! ಬೆಳಗಿನಿಂದ ನೀನು ಕಾಣದೇ ಹೋದಿಯಲ್ಲಾ? ಏನನ್ನು ತಿನ್ನಲಿಲ್ಲ. ಉಪವಾಸ ಇಷ್ಟು ಹೊತ್ತು ಹೇಗೆ ಇದ್ದೆ ಮಗೂ" ಎಂದು ಬಹು ವಿಧದಿಂದ ಆರೈಸಿದರು. ಕಂದನು ಮಾತ್ರ ಏನು ಮಾತಾಡಲಿಲ್ಲ ನಗುತ್ತ ನಿಂತಿದ್ದನು. ಕೆಲವು ಕಾಲ ಕಳೆಯಿತು ಬರು ಬರುತ್ತ ಬಾಲಕನು ದೊಡ್ಡವನಾದಂತೆ ಅವನ ಎಂಟನೇ ವರ್ಷಕ್ಕೆ ಚೌಲೋಪನಯನಗಳಾದವು. ವಿದ್ಯಾಭ್ಯಾಸಕ್ಕಾಗಿ ಬಾಲಕನನ್ನು ಅಲ್ಲೆ ತಕ್ಕ ಗುರುಗಳ ಹತ್ತಿರಕ್ಕೆ ಕಳುಹಿಸಿದರು.

ಯುವಕನಾದಂತೆ ಬಲುಶ್ರದ್ಧೆಯಿಂದ ಗುರುಗಳ ಹತ್ತಿರ ಎಲ್ಲಾ ವಿದ್ಯಗಳನ್ನು ಕಲಿತನು. ಅಲ್ಲಿಯೇ ಸ್ವಲ್ಪ ದೂರದಲ್ಲಿರುವ (ರಜತಪುರಿ) ಉಡುಪಿಯಲ್ಲಿ ಸುಪ್ರಸಿದ್ಧರಾದ ಯತಿವರೇಣ್ಯರು ಶ್ರೀ ಅನಂತೇಶ್ವರ ಆಲಯದಲ್ಲಿ ಬಿಡದಿ ಮಾಡಿರುವುದಾಗಿ ಬಾಲಕನ ತಂದೆಗೆ ತಿಳಿದು ಬಂದಿತು. ವೈಷ್ಣವ ಯತಿ ಪುಂಗವರಾದ ಶ್ರೀ ಶ್ರೀ ಶ್ರೀ 1008 ಅಚ್ಯುತ ಪ್ರೇಕ್ಷಾಚಾರ್ಯಗುರುವರ್ಯರ ಹತ್ತಿರ ವಿದ್ಯಾಭ್ಯಾಸಕ್ಕಾಗಿ ತನ್ನ ಮಗನಾದ ವಾಸುದೇವನನ್ನು ಬಿಡಲು ನಿಶ್ಚಯಿಸಿ, ಒಂದು ದಿನ ಪ್ರಾತಃ ಕಾಲದಲ್ಲೇ ಎದ್ದು ವಾಸುದೇವನನ್ನು ಹಿಂದೆಯೆ ಕರೆದು ಕೊಂಡು ಉಡುಪಿಗೆ ಹೋರಟರು. ಆ ಮೇಲೆ ಅನಂತೇಶ್ವರ ದೇವಾಲಯದ ಆ ಶಿವನ ದರ್ಶನ, ಮತ್ತು ಯತಿವರೇಣ್ಯರ ದರ್ಶನಗಳಾದವು. ಅವರಿಗೆ ತಂದೆ ಮಕ್ಕಳು ಸಾಷ್ಟಾಂಗವೆರಗಿ "ಗುರುಗಳೇ ಇವನು ನನ್ನ ಮಗನು ಇದುವರಿಗೆ ಸಂಧ್ಯಾವಂದನೆ, ದೇವತಾರ್ಚನೆ ಮುಂತಾದ ಭಾಗ ಮುಗಿಯಿತು ಮುಂದೆ ಇವನನ್ನು ನಿಮ್ಮ ಹತ್ತಿರ ವೇದ ವೇದಾಂಗಗಳ ಅಧ್ಯಯನಕ್ಕಾಗಿ ಬಿಡಲು ತಮ್ಮ ಅಭಿಪ್ರಾಯ ತಿಳಿಯಲು ಬಂದಿರುವೆನು" ಎಂದು ಪ್ರಾರ್ಥಿಸಿದನು.

"ಅದಕ್ಕೇನು! ತಪ್ಪದೇ ಮಗುವನ್ನು ವಿದ್ಯಾಭ್ಯಾಸಕ್ಕಾಗಿ ಕರೆತನ್ನಿ. ಬಾಲಕನು ಚುರುಕಾಗಿ ಇದ್ದಾನೆ. ಅವನ ಭವಿಷ್ಯ ಅಮೋಘವಾದದ್ದು, ನೀವೂ ಸಂಶಯ ಪಡದೇ ಇಂದೇ ಇಲ್ಲಿ ಬಿಟ್ಟು ಹೋಗಿ" ಎಂದು ಯತಿವರೇಣ್ಯರು ನುಡಿದರು. ಗುರುಗಳ ಅಪ್ಪಣೆಯಂತೆ ವಾಸುದೇವನ ತಂದೆಯವರು ಮಗನನ್ನು ಗುರುಗಳ ಆಶ್ರಯದಲ್ಲಿ ಬಿಟ್ಟು ಹೋದರು. ಮನೆಯಲ್ಲಿ ತಮ್ಮ ಪತ್ನಿಗೆ ನಡೆದ ವಿಚಾರವನ್ನು ತಿಳಿಸಿ ಮಗನನ್ನು ಬಿಟ್ಟು ಬಂದ ವಿಷಯ ತಿಳಿಸಿದರು. ವಾಸುದೇವನ ತಾಯಿಗೆ ಮುಂದೆ ತನ್ನ ಮಗನು ದೊಡ್ಡ ಪಂಡಿತನಾಗ ಬೇಕೆಂದು ಆಸೆ, ತಂದೆಗೂ ಅಷ್ಟೆ ಬಯಕೆ, ಒಬ್ಬರಿಗೊಬ್ಬರು ಅತಿ ಸಂತೋಷ ಪಡುತ್ತಿದ್ದರು.

ವಾಸುದೇವನು ದಿನ ದಿನಕ್ಕೆ ಗುರುಗಳಿಗೆ ಅತಿ ಸನ್ನಿಹಿತನಾಗ ತೊಡಗಿದನು. "ಏಕಸಂದಿ ಗ್ರಾಹಿ" ಒಮ್ಮೆ ಹೇಳಿದ ಪಾಠವನ್ನು ಹಿಂದಲೇ ಹೇಳುವಂತ ಚುರುಕಾದ ವಿದ್ಯಾವಂತನೇ ಆಗಿ ಬಿಟ್ಟನು. ಹೀಗೆ ಕೆಲವು ವರ್ಷಗಳು ಕಳೆದವು. ವಾಸುದೇವನ ಪಾಂಡಿತ್ಯವನ್ನು ಕಂಡ ಗುರುಗಳೆ ಆಶ್ಚರ್ಯ ಪಟ್ಟರು. ವಾಸುದೇವನನ್ನು ಹತ್ತಿರಕ್ಕೆ ಕರೆದು "ವತ್ಸಾ! ನಿನ್ನ ಪಾಂಡಿತ್ಯ ಅಮೋಘ, ನನಗೆ ತಿಳಿಯಲಾರದ ಎಷ್ಟೋ ವಿಷಯಗಳ ಸೂತ್ರಗಳನ್ನೆ ರಚಿಸಿ, ಇತರ ಪಂಥದ ಪಂಡಿತರನ್ನೆ ಸೋಲಿಸಿ ದಿಗ್ವಿಜಯವನ್ನು ಗಳಿಸುವಂಥ ನಿನ್ನ ಮುಖ ವರ್ಚಸ್ಸು ನೋಡುತ್ತಲೆ ತಿಳಿದು ಬರುತ್ತದೆ." ಎಂದು ಶಿಷ್ಯನ ಪಾಂಡಿತ್ಯಕ್ಕೆ ಬೆರಗಾದ ಶ್ರೀ ಅಚ್ಯುತ ಪ್ರೇಕ್ಷಾಚಾರ್ಯರು ವಾಸುದೇವನನ್ನು ಮನಃ ಪೂರ್ವಕ ಆಶೀರ್ವದಿಸಿದರು. ಗುರುಗಳಿಗೆ ಬಾಲಕನೆ ತಮ್ಮ ಮಠಕ್ಕೆ ಉತ್ತರಾಧಿಕಾರಿಯಾಗಿದ್ದರೆ ತಮ್ಮ ಸಮಾನ ಆನಂದ ಪಡುವವರೇ ಇಲ್ಲವೆಂದು ಯೋಚಿಸುತಿದ್ದರು. ವಾಸುದೇವನ ತಂದೆ ತಾಯಿಯವರಿಗೆ ಏಕೈಕ ಪುತ್ರ ವಾಸುದೇವನು. ಗುರುಗಳಿಗೆ ಮುಂದೆಯೇನು ತೋಚದೆ ತಟಸ್ಥರಾಗಿದ್ದರು. ವಾಸುದೇವನು ಗುರುಗಳ ಮನೋ ಇಂಗಿತವನ್ನರಿತು, ತನ್ನ ಅಭಿಲಾಷಕ್ಕೆ ಪೂರಕವಾಗಿರುವದು, ಗುರುಗಳ ಮನಸ್ಸು ಉಭಯತಾ ಸರಿ ಹೋಗಿದ್ದಿತು. ಬಾಲಕನಿಗೆ ಒಳ್ಳೆಪ್ರಾಯ ಉಕ್ಕೇರುತ್ತಿತ್ತು. ಅವನ ಮುಖ ವರ್ಚಸ್ಸು ವಯಸ್ಸಿಗೆ ತಕ್ಕಂತ ಮುಖ ಪ್ರಕಾಶಮಾನವಾಗಿತ್ತು. ಮಗನು ಒಂದು ದಿನ ತನ್ನ ತಂದೆ ತಾಯಿಯರ ಮುಂದೆ ತಾನು ಅವಿವಾಹಿತನಾಗಿ ಸನ್ಯಾಸವನ್ನು ಪರಿಗ್ರಹಿಸಿ ಲೋಕೋಪಯೋಗಿ ಕಾರ್ಯಗಳನೇಕ ಮಾಡಬೇಕೆಂಬ ಬಯಕೆಯನ್ನು ಮುಂದಿಟ್ಟನು. ಆಗ ಅವನ ಮಾತುಗಳನ್ನು ಕೇಳಿ ಗಾಬರಿಗೊಂಡು ತಂದೆ ತಾಯಿಯರು " ಮಗೂ ! ಅಂಥ ಅನರ್ಥದ ಕೆಲಸ ಮಾಡ ಬೇಡಪ್ಪಾ! ನಮ್ಮಗಿರುವುದೇ ನೀನೊಬ್ಬ. ನೀನು ಸನ್ಯಾಸ ಸ್ವೀಕರಿಸಿದರೆ ನಮ್ಮ ವಂಶದ ಗತಿಯೇನು. ಹೀಗೆಲ್ಲಾ ಹುಚ್ಚು, ಹುಚ್ಚು ಆಲೋಚನೆಯನ್ನು ಬಿಟ್ಟು ಒಳ್ಳೆ ಅಂದವಾದ ಕನ್ಯಯ ಕೈ ಹಿಡಿದು ಸುಖವಾಗಿ ಸಂಸಾರ ಮಾಡಿ ಕೊಂಡು ನಮಗೆ ಆನಂದವಾಗುವಂತೆ ಮಾಡಪ್ಪ! ಎಂದು ಪರಿ ಪರಿ ವಿಧದಿಂದ ಬೇಡಿಕೊಂಡರು.

ಅಕ್ಕ ಪಕ್ಕದವರಾದ ವೃದ್ಧರು. ಮೊದಲು ಬಾಲ್ಯದಲ್ಲಿ ವಿದ್ಯಾ ಕಲಿಸಿದ ಗುರುಗಳು ಬಂದು ಬಹಳ ಪರಿಯಿಂದ ಬೇಡಿಕೊಳ್ಳಲು ವಾಸುದೇವನು ತನ್ನ ತಂದೆ ತಾಯಿಯರಿಗೆ ಇಂತೆಂದನು" ತಂದೆಯ ವರೆ ನಾನು ಈಗಲೆ ತುರೀಯಾಶ್ರಮವನ್ನು ಸ್ವಿಕರಿಸುವದಿಲ್ಲ. ಇನ್ನು ಮುಂದೆ ಒಂದೇ ವರ್ಷದಲ್ಲಿ ನನಗೊಬ್ಬ ತಮ್ಮನು ಬರುವವನಿದ್ದಾನೆ. ಅವನು ಬಂದ ನಂತರವೇ ನಾನು ಸನ್ಯಾಸವನ್ನು

ಸ್ವೀಕರಿಸುವದು. ಅಲ್ಲಿಯವರಿಗೆ ನೀವೆಲ್ಲಾ ನಿಶ್ಚಿಂತರಾಗಿಲ್ಲಾ ಸಂತೋಷದಿಂದ ಕಾಲ ಕಳೆಯಿರಿ." ಎಂದ ವಾಸುದೇವನ ಮಾತನ್ನು ಯಾರು ನಂಬಲಿಲ್ಲ ಇಷ್ಟು ವರ್ಷಗಳು ಕಳೆದ ನಂತರ ಈ ವಯಸ್ಸಿಗೆ ಮತ್ತೊಬ್ಬ ಮಗನಾಗುವ ಸಾಧ್ಯವಿಲ್ಲ ಏನೇ ಆಗಲಿ ವಾಸುದೇವನ ವಿಶ್ವಾಸಕ್ಕೆ ಯಾರೇನು ಅನ್ನಲಿಲ್ಲ.

ವಾಸುದೇವನ ಜ್ಯೋತಿಷ್ಯದಂತೆ ನಡುಮನೆ ದಂಪತಿಗಳಿಗೆ ಎರಡನೆ ಗಂಡು ಮಗುವಾಯಿತು. ಮನೆಯವರೆಲ್ಲರು ಸಂತಸಗೊಂಡು ವಾಸುದೇವನ ಜ್ಯೋತಿಷ್ಯ ತೂ. ಚಾ. ತಪ್ಪದೇ ಸಂತೋಷವನ್ನು ಉಂಟುಮಾಡಿತು. ಆ ಬಾಲಕನು ದಿನ ದಿನ ಪ್ರವರ್ಧ ಮಾನನಾಗಿ ಬೆಳೆಯುತ್ತ ಚತುಷಷ್ಠಿ ವಿದ್ಯಾಪರಿಪೂರ್ಣತೆಯನ್ನು ಶ್ರೀ ಅಚ್ಯುತಪ್ರೇಕ್ಷ ತೀರ್ಥ ಗುರು ಕೃಪಾಬಲದಿ ಅತಿ ಶೀಘ್ರ ಕಾಲದಲ್ಲೆ ಪಡೆದರು. ಮಹಿಮಾ ಮಾನ್ವಿತರು, ಕಾರಣ ಜನ್ಮರು, ಆದ ವಾಸುದೇವ ಬಾಲಕರು ಆಗ ಅವರಿಗೆ ಹದಿನೈದರ ಒಳಗೆ ವಯಸ್ಸು, ಎಲ್ಲಾ ವಿದ್ಯಾಭ್ಯಾಸವನ್ನು ಮುಗಿಸಿ ಶ್ರೀಗುರುಗಳ ಆಶೀರ್ವಾದವನ್ನು ಪಡೆದು. ತನ್ನ ನಿಜ ಗ್ರಾಮವಾದ ಪಾಜಕಾ ಕ್ಷೇತ್ರವನ್ನು ಸೇರಿದರು.

ಪಂಡಿತೋತ್ತಮರಾದ ವಾಸುದೇವ ಪಂಡಿತರು ಮನೆಯಲ್ಲಿ ಸುಮ್ಮನೆ ಇರಲಾರದೆ ತಮ್ಮ ಪೂರ್ವಿಕರು ಸಂಗ್ರಹಿಸಿದ ತಾಳಗಂಥ್ರಗಳ ಶೋಧನ ಮಾಡುತ್ತ, ಮನಿಯಲ್ಲೇಯಿದ್ದ ಅವರ ಪ್ರೀತಿಯ ವೃಷಭ, ಅವರ ಎದುರಿನಲ್ಲೆ ಬಾಯಿ ಯಾಡಿಸುತ್ತ, ವಾಸುದೇವನನ್ನೆ ಎವೆ ಇಕ್ಕದೆ ನೋಡುತ್ತ ಮಲಗಿರುತಿತ್ತು - ಎತ್ತಿನ ಮುಂದೆ ಕುಳಿತಾಗ ಇಬ್ಬರು ಮೌನತಾಳಿ ಒಬ್ಬೊರನೊಬ್ಬರು ನೋಡುತ್ತಲೇ ಇರುತ್ತಿದ್ದರು. ಅವರೀರ್ವರ ಮೌನ ಭಾಷೆ ಯಾರಿಗೂ ಅರ್ಥವಾಗದು. ಹೀಗೆ ಕೆಲವು ದಿನಗಳು ಕಳೆದ ಮೇಲೆ ವಾಸುದೇವನು ಹೇಳಿದಂತೆ. ಆ ಮನಿಯಲ್ಲಿ ಇನ್ನೊಬ್ಬ ಹೊಸ ಅತಿಥಿ ಜನ್ಮತಾಳಿದನು. ತನಗೆ ತಮ್ಮ ಜನಿಸಿದಕ್ಕೆ ವಾಸುದೇವನು ಬಹು ಸಂತಸ ಪಟ್ಟನು. ಕೆಲವು ದಿನಗಳ ಬಳಿಕ ತನ್ನ ತಮ್ಮನ ವಯಸ್ಸು ಎರಡು ವರ್ಷ ತುಂಬುತ್ತಿರಲು, ತಂದೆ ತಾಯಿಯರನ್ನು ಕರೆದು. "ನನ್ನ ಮಾತಿನಂತೆ ನಡೆಸಲು ಶ್ರೀಹರಿಯು ನಿಮ್ಮಗೆ ಇನ್ನೊಬ್ಬ ಮಗನನ್ನು ಪ್ರಸಾದಿಸಿರುವನು. ಈಗ ನನಗೆ ನೀವು ಸಂತೋಷದಿಂದ ಅಪ್ಪಣೆ ಕೊಡಬೇಕು" ಎಂದು ಸನ್ಯಾಸದ ಬಗ್ಗೆ ಪ್ರಸ್ತಾಪ ಮಾಡಿದನು. ಬಹು ವಿಧದಲ್ಲಿ ತಂದೆ ಪ್ರಯತ್ನ ಪಟ್ಟರು ಸಾಧ್ಯವಾಗಲಿಲ್ಲ. ಬೇಸರ ಪಟ್ಟ ತಂದೆಯವರು ಬೇಡ ಬೇಡವೆಂದು ಮಗನಿಗೆ ಸಾಷ್ಟಾಂಗ ವೆರಗಿ ಬೇಡಿ ಕೊಂಡರು. ಬಾಲಕನಿಗೆ ತಂದೆ ನಮಸ್ಕಾರ ಮಾಡಿದಾಗ ಮಗನು ಗಟ್ಟಿಯಾಗಿ ನಕ್ಕು "ಅಪ್ಪಾ! ನೀವು ಸುಮ್ಮನೆ ಬಾಯಿಂದ ನಿಮ್ಮ ಅಂಗೀಕಾರ ತಿಳಿಸಿದರೆ ಸಾಕಿತ್ತು. ಈಗ ನೀವು ಮಾಡಿದ ಮಹೋಪಕಾರ ನಾನು ಜನ್ಮಜನ್ಮಕ್ಕೆ ಮರೆಯುವದಿಲ್ಲ. ಮುಖ್ಯವಾಗಿ ನಿಮ್ಮ ಗಮನಕ್ಕೆ ತರುವುದೇನೆಂದರೆ? ಮಗನಿಗೆ ತಂದೆಯಾವಾಗ ನಮಸ್ಕಾರ ಮಾಡುವನು? ತನ್ನ ಮಗನ ತುರೀಯಾ ಶ್ರಮದಲ್ಲೇ ಹೊರತು ಇನ್ನಾವಗಲೂ ಮಾಡಬಾರದು. ಈಗ ತಾವು ನನಗೆ ಸನ್ಯಾಸ ಸ್ವೀಕರಿಸಲು ಸಂಪೂರ್ಣ ಅಧಿಕಾರವನ್ನೇ ಕೊಟ್ಟಿರಿ. ಈ ವಿಧವಾಗಿ ಅನುಗ್ರಹವನ್ನು ಹಿಂದೇ ಯಾರೂ ಮಾಡಿರಲಿಲ್ಲ. ಇನ್ನುಮುಂದೆ ನನಗೆ ಬೇಗ ನನ್ನ ಗುರುಗಳ ಹತ್ತಿರಕ್ಕೆ ಹೋಗಲು ನನ್ನ ತಾಯಿಯವರ ಕಡೇಂದ ಅಪ್ಪಣೆ ಕೊಡಿಸಿರಿ" ಎಂದು ಹೇಳುತ್ತ ತಾಯಿಗೆ ಮಾತ್ರ ನಮಸ್ಕರಿಸಿ ಪ್ರಯಾಣವನ್ನು ಬೆಳಿಸಿದರು. ತಾಯಿಗೆ ನಮಸ್ಕಾರ ಮಾಡುವಾಗ ತಾಯಿಯ ಬಾಯಿಯಿಂದ ತಾನಾಗಿ ತಾನೆ" ಮಹಾ ಕೀರ್ತಿವಂತನಾಗು ಮಗನೇ"

ಎಂದು ಆಶೀರ್ವಾಚನದ ಶಬ್ದ ಬಂದು ಬಿಟ್ಟಿತ್ತು. ಆ ಮೇಲೆ ವಾಸುದೇವನು ವೇಗದಿಂದ ಗುರುಗಳಿದ್ದ ಅನಂತೇಶ್ವರ ಆಲಯಕ್ಕೆ ಬಂದು ಬಿಟ್ಟನು. ಆಗ ಶ್ರೀ ಅಚ್ಯುತಪ್ರೇಕ್ಷಾಚಾರ್ಯರು ಸ್ನಾನ ಮಾಡಿ ದೇವರ ಸನ್ನಿಧಿಗೆ ಬಂದು ಶ್ರೀಹರಿಯನ್ನು ತಮ್ಮ ಮಠಕ್ಕೆ ತಕ್ಕ ಉತ್ತರಾಧಿಕಾರಿಯನ್ನು ಪ್ರಸಾದಿಸು ಹರೀ! ಎಂದು ನೊಂದ ಮನಸ್ಸಿನಿಂದ ಪ್ರಾರ್ಥಿಸುತ್ತಿದ್ದರು. ವಯೋ ವೃದ್ಧರು. ದೇಹ ಬಹಳವಾಗಿ ಕ್ಷೀಣಿಸಿತ್ತು ಶ್ರೀಹರಿಯೇ ಕರೆ ತಂದನೋಯೆಂಬಂತೆ, ಗುರುಗಳ ಪಾದಕ್ಕೆ ನಮಸ್ಕರಿಸುತ್ತಾ, " ಗುರುಗಳೆ ನನಗೆ ಆಶ್ರಮ ನೀಡಿ" ಎಂದು ನುಡಿಯುತ್ತಾ ದೀರ್ಘ ದಂಡ ಪ್ರಣಾಮ ಮಾಡಿದನು.

ಭಗವಂತನನ್ನು ಪ್ರಾರ್ಥಿಸುತ್ತಿದ್ದ ಯತಿವರೇಣ್ಯರು. " ಆಶ್ರಮ ನೀಡಿ" ಎಂದು ನುಡಿದ ಮಾತನ್ನು ಕೇಳಿ ತಿರುಗಿ ನೋಡುತ್ತಲೇ ವಾಸುದೇವನೇ ನಮಸ್ಕಾರ ಮಾಡುತ್ತಿರುವುದನ್ನು ಕಣ್ಣಾರೆಕಂಡು. "ಹೇ! ಪರಮಾತ್ಮಾ, ನನಗೆ ಮುಂದೇನು ತೋಚದೇ ನೊಂದ ಮನಸ್ಸಿನಿಂದ ಈ ಮಠಕ್ಕೆ ಉತ್ತರಾಧಿಕಾರಿಯನ್ನು ತೋರಿಸು, ಎಂದು ಕೇಳುವಷ್ಟರಲ್ಲೇ ನನ್ನ ಶಿಷ್ಯನಾಗಿ, ಮಹಾ ಪಂಡಿತನಾದ, ಅಜೇಯನಾದ, ಯುವಕನನ್ನು ನನ್ನ ಕಣ್ಣಮುಂದೆ ತಂದುನಿಲ್ಲಿಸಿದಿ. ನನ್ನ ಮನದಲ್ಲಿದ್ದವನನ್ನೇ ತಂದೆ, ಎಂಥಾ ದಯಾಮಯ! ದೀನ ಬಂಧೂ, ಎಲ್ಲವನ್ನು ಅರಿತ ಸರ್ವಾಂತರ್ಯಾಮಿ! ನಿನ್ನನ್ನು ಸ್ತೋತ್ರಮಾಡಲು ಸಹ ತೋಚದಂತೆ ಅಮಿತಾನಂದವನ್ನುಂಟು ಮಾಡಿ, ನನ್ನಗೆ ಬಾಯಿಯೆ ಇಲ್ಲದಂತೆ ಮಾಡಿ ಬಿಟ್ಟಿ, ಪಾಹಿ ಮಾಂ ರಕ್ಷಮಾಂ" ಎಂದು ಪರಮಾತ್ಮನನ್ನು ಸ್ಮರಿಸುತ್ತ, ಬಾಲಕನನ್ನು ನೋಡಿ ಬಂದೆಯಾ! ವಾಸೂ ನೀನು ಎಂಥ ಪುಣ್ಯ ಜೀವಿಯಪ್ಪಾ" ಎಂದು ನಮಸ್ಕರಿಸುತ್ತಿರುವ ವಾಸುದೇವನನ್ನು, "ದಿಗಂತ ಯಶೋಪ್ರಾಪ್ತಿರಸ್ತು" ಎಂದು ಆಶೀರ್ವದಿಸಿದರು. ಆ ಮೇಲೆ ದೇವರ ಪೂಜೆ, ನೈವೇದ್ಯ, ಮಹಾ ಮಂಗಳಾರತಿಗಳಾದವು ಭಕ್ತಾದಿಗಳಿಗೆ ಆರತಿ, ತೀರ್ಥ ಪ್ರಸಾದವನ್ನು ಗುರುಗಳ ಶಿಷ್ಯ ವೃಂದದವರು ನೆರವೇರಿಸುತ್ತಿದ್ದರು. ಆಚಾರ್ಯರು ಬಾಲಕ ವಾಸುದೇವನನ್ನು ತಮ್ಮ ಹಿಂದೆ ಒಳಭಾಗಕ್ಕೆ ಕರೆದೋಯ್ದರು. ಅಲ್ಲಿ ಶ್ರೀಗಳವರಿಗೆ ಮತ್ತು ವಾಸುದೇವನಿಗೆ ಎರಡು ಪತ್ರಾವಳಿಗಳನ್ನು ಹಾಕಿದ್ದರು. ಗುರುಗಳು ತೀರ್ಥ ತಾವು ಸ್ವೀಕಾರಮಾಡಿ ವಾಸುದೇವನಿಗೆ ಇತ್ತರು.

ಉಭಯರ ಭೋಜನಗಳಾದವು. ಗುರುಗಳು ಅಂದು ವಾಸುದೇವನನ್ನು ಹೆಚ್ಚಿಗೆ ಮಾತನಾಡಿಸದೆ ಸ್ವತಂತ್ರನಾಗಿ ಆ ದಿನ ಹೊರಗೆ ತಿರುಗಾಡಲು ಕಳಿಸಿ ಕೊಟ್ಟು ತಾವು ವಿಶ್ರಾಂತಿ ತೆಗೆದು ಕೊಂಡರು. ರಾತ್ರಿಗೆ ಪುನಃ ಗುರು ಶಿಷ್ಯರ ಸಮಾಗಮವಾಯಿತು. ಆಗ ಗುರುಗಳು "ವಾಸುದೇವಾ! ನೀನು ಸನ್ಯಾಸವನ್ನು ಸ್ವೀಕರಿಸಲು ನಿಮ್ಮ ತಂದೆ ತಾಯಿಯವರು ಸಮ್ಮತಿಸಿರುವರಾ! ಅವರಿಗೆ ಎಲ್ಲಾ ವಿವರವನ್ನು ನೀನು ತಿಳಿಸಿರುವಿಯಾ?" ಎಂದು ಶಿಷ್ಯನನ್ನು ವಿಚಾರಿಸಿದರು "ಎಲ್ಲರಿಗೂ ಸಮ್ಮತವೇ ಆಗಿದೆ. ಆದರೆ ತಾವು ಈಕಾರ್ಯ ಕ್ರಮವನ್ನು ಯಾವಾಗಿಟ್ಟು ಕೊಂಡಿರುವಿರಿ? ಆದಷ್ಟು ತೀವ್ರ ನಡೆಯಬೇಕು. ಆಲಸ್ಯ ಮಾಡಿದಲ್ಲಿ ವಿಘ್ನಗಳು ಬಹಳವಾಗಿ ಬರಬಹುದು. ಗುರುಗಳೇ! ತಮ್ಮ ಮನಸ್ಸಿನ ವಿಷಯ ತಿಳಿಸಿರಿ" ಎಂದು ವಾಸುದೇವ ಕೇಳಲು, ಗುರುಗಳು ತಮ್ಮ ಮನದಲ್ಲೇ ಶಿಷ್ಯನ ಆತುರತೆಗೆ ಸಂತಸಗೊಂಡರು. "ವಾಸುದೇವಾ ನಾಳೆ ಪ್ರಾತಃ ಕಾಲದಲ್ಲೆ ಸುದರ್ಶನ ಹೋಮ, ಘಟಶ್ರಾದ್ಧಾ ಇತ್ಯಾದಿ ಕಾರ್ಯಗಳು ಪ್ರಾರಂಭವಾಗುತ್ತವೆ. ಆ ಮೇಲೆ ತುರಾಯಾಶ್ರಮ

ಸ್ವೀಕರಿಸುವದು. ಆದಕ್ಕಾಗಿ ವೇದ ಪಂಡಿತರು, ಪುರೋಹಿತರು, ಕರ್ಮಕಾಂಡ ಜರಿಗಿಸುವ ಬ್ರಾಹ್ಮಣ ಜನಗಳಿಗೆ ಇಂದು ಸಂಜೆಗೆ ಬಂದು ಬಿಡಲು ಶಿಷ್ಯರನ್ನು ಕಳಿಸಿರುವೆನು. ಇಂದು ರಾತ್ರಿಗೆ ನಿನ್ನ ಊಟವಿಲ್ಲ. ಉಪಹಾರ ಮಾತ್ರ ತೆಗೆದುಕೊಳ್ಳಬೇಕು ಎಂದು ನಾಳೆ ನಡೆಯ ತಕ್ಕ ಕಾರ್ಯಕ್ರಮಗಳ ಬಗ್ಗೆ ತಿಳಿಸುತ್ತಾ ಕೆಲವು ಕ್ಷಣಗಳಲ್ಲೆ ಉಭಯರು ನಿದ್ರೆಗೊಳಗಾದರು.

ಬೆಳಗಾಗುತ್ತಲೇ ಶಿಷ್ಯರು ಗುರುಗಳ ಆಜ್ಞಾನುಸಾರ, ಪುರೋಹಿತ ಪಂಡಿತಾದಿ ಜನಗಳನ್ನು ಕರೆದು ತಂದರು, ಕೆಲವರು ಪಾಜಕಾ ಕ್ಷೇತ್ರ ವಾಸಿಗಳಾದ ಬ್ರಾಹ್ಮಣ ಸಮೂಹವನ್ನೆ ಕರೆದು ತಂದರು. ಅವರಲ್ಲಿ ವಾಸುದೇವನ ತಂದೆ ತಾಯಿಗಳು ಬಂದರು. ಶಾಸ್ತ್ರ ಸಮ್ಮತವಾಗಿ ವೇದ ಮಂತ್ರಗಳ ಘೋಷಣೆಯ ಮಧ್ಯದಲ್ಲಿ ಬಹು ವಿಜೃಂಭಣೆಯಿಂದ ವಾಸುದೇವನಿಗೆ ತುರೀಯಾ ಆಶ್ರಮವಿತ್ತು ಯತಿಗಳ ಪೀಠದಲ್ಲಿ ಕುಳ್ಳಿರಿಸಿ ಯತ್ಯಾಶ್ರಮದ ನಾಮಕರಣ "ಮಧ್ವಮುನಿ" ತೀರ್ಥರೆಂದು ಸರ್ವ ಜನರಿಗೆ ತಿಳಿಸುವಂತೆ ಶ್ರೀ ಅಚ್ಚುತ ಪ್ರೇಕ್ಷಾಚಾರ್ಯರೆ ಘೋಷಿಸಿದರು. ಆ ಹೆಸರನ್ನು ಕೇಳಿದ ಭಕ್ತಾದಿಗಳು ಜಯ ಜಯಕಾರವನ್ನು ನುಡಿದರು. ಅಷ್ಟರಲ್ಲೇ ತಾಯಿ ಅಲ್ಲಿಗೆ ಬಂದು ತನ್ನ ಕುಮಾರನ ವೈಭವವನ್ನು ನೋಡಿ ಬೆರಗಾಗಿ ನಿಂತು ಬಿಟ್ಟಳು ಅದನ್ನು ಕಂಡ ಬಾಲಯತಿ ವರ್ಯರು ತಾಯಿಗೆ ನಮಸ್ಕಾರ ಮಾಡಿನಿಂತಾಗ ಹೆದರಿ, " ಗುರುಗಳೇ ಈಗ ನೀವು ದೊಡ್ಡವರು ನನ್ನಗೆ ನಮಸ್ಕಾರ ಮಾಡಬಾರದು. ಅದು ತಪ್ಪು" ಎಂದು ದೂರನಿಂತರು. ಶ್ರೀಮನ್ಮಧ್ವ ಮುನೀಂದ್ರರು " ಅಮ್ಮಾ! ತಾಯಿಕಿಂತ ದೊಡ್ಡ ದೈವವಾವುದು ಇಲ್ಲ ಎಲ್ಲಾ ಯತಿಗಳು ತಮ್ಮ ತಮ್ಮ ತಾಯಿಯಂದರಿಗೆ ನಮಸ್ಕಾರ ಮಾಡಲೇ ಬೇಕು. ಇದು ಎಂದೂ ತಪ್ಪಾಗುವದಿಲ್ಲ " ಎಂದು ಸಮಾಧಾನ ಗೊಳಿಸಿದರು. ಅಲ್ಲಿ ನಡೆದ ಆಗಿನ ವೈಭವವು ಮಾನವರಿಗೆ ಮಾತ್ರ ಹೊಗಳಲು ಸಾಧ್ಯವಾಗದು. ಎಲ್ಲಿ ನೋಡಿದರು ವೇದಗಳ ಘೋಷಣೆ, ಬ್ರಾಹ್ಮಣರು ಹೇಳುತ್ತಿದ್ದ ರುಕ್ಕುಗಳು, ಪುರಾಣ ಶ್ಲೋಕಗಳು, ಉಪನಿಷತ್ತಿನಲ್ಲಿ ಶ್ಲೋಕಗಳ ತತ್ವ ತಾತ್ಪರ್ಯವನ್ನು ಕೆಲವು ಪಂಡಿತರು ಹೇಳುತ್ತಿದ್ದರು. ಸಾವಿರಾರು ಬ್ರಾಹ್ಮಣರ ಆಗಮನವಾಗಿತ್ತು ಇಂಥ ವೈಭವದ ಸಮಾರಂಭವನ್ನು ಜನ್ಮತಃ ನಾವು ನೋಡಿಲ್ಲವೆಂದು ಪಂಡಿತರೇ ಹೇಳುತ್ತಿದ್ದರು. ಮಧ್ಯಾಹ್ನದವರಿಗೆ ಎಲ್ಲಾ ಕಾರ್ಯ ಮುಗಿಯಿತು. ಶ್ರೀ ಶ್ರೀ ಶ್ರೀ 1008 ಅಚ್ಚುತ ಪ್ರೇಕ್ಷಾಚಾರ್ಯರು, ನೂತನ ಬಾಲ ಯತಿಗಳಾದ ಶ್ರೀಮಧ್ವಮುನಿಯತಿವರ್ಯರನ್ನು ಸ್ನಾನಾದಿಗಳನ್ನು ಮುಗಿಸಿ ಬಂದನಂತರ ಶಿಷ್ಯ ಸಮೇತರಾಗಿ ಗುರುಶಿಷ್ಯ ವರ್ಯರು ಮೂಲ ರಾಧಾಕೃಷ್ಣ ನರಹರಿ ರಾಮಕೃಷ್ಣರ ಪೂಜೆ ಮುಗಿಸಿದರು. ಸರ್ವ ಜನರಿಗೆ ತೀರ್ಥ ಪ್ರಸಾದಗಳ ವಿತರಣೆಯಾಯಿತು. ಬಂದವರೆಲ್ಲ ಮೃಷ್ಟಾನ್ನ ಭೋಜನ ಮಾಡಿ, ಪುನಃ ಉಭಯ ಯತಿವರೇಣ್ಯರಿಗೆ ನಮಸ್ಕರಿಸಿ ತಮ್ಮ ತಮ್ಮ ಮನೆಗಳಿಗೆ, ದೂರದಿಂದ ಬಂದ ವಿಪ್ರರು ತಮ್ಮ ಗ್ರಾಮಗಳಿಗೆ ತೆರಳಿದರು.

ಶ್ರೀ ಶ್ರೀ ಶ್ರೀ 1008 ಮಧ್ವಮುನಿ ತೀರ್ಥ ಶ್ರೀ ಪಾದಂಗಳವರು ಶ್ರೀಹಂಸ ನಾಮಕ ಪರಮಾತ್ಮನ ಸಾಕ್ಷಾತ್ಪರಂಪರವಾದ ಶ್ರೀಮಠದ ಸರ್ವಾಧಿಕಾರವನ್ನು ಪಡೆದರು. ಅವರಿಗೆ ಆಶ್ರಮ ವನ್ನಿತ್ತ ಗುರು ವರೇಣ್ಯರು, ವಯೋವೃದ್ಧರೂ, ಕೃಶಿಸಿ ಹೋಗಿದ್ದ ದೇಹದಾತ್ಯಂತ ಇಂಗಿ ಹೋಗಿತ್ತು. ಅವರ ನೇತ್ರ ದೃಷ್ಟಿ ಕಡಿಮೆಯಾಗಿತ್ತು. ಇಷ್ಟು ದೊಡ್ಡ ಸಂಸ್ಥಾನವನ್ನು ಸುಗಮವಾಗಿ ನಡೆಸುವ

ಶಕ್ತಿ ಅವರಿಗಿಲ್ಲದ ಕಾರಣ, ಶಿಷ್ಯಪುಂಗವರೇ ವಹಿಸಿಕೊಂಡರು. ಶಿಷ್ಯನ ಇಷ್ಟು ದೊಡ್ಡ ಸಾಹಸದ ಕಾರ್ಯಭಾರ, ಇಷ್ಟು ಚಿಕ್ಕ ವಯಸ್ಸಿನಲ್ಲಿ ಸುಗಮವಾಗಿ ನಡೆಸುವದನ್ನು ಕಂಡು, ಶ್ರೀ ಶ್ರೀ ಶ್ರೀ 1008 ಅಚ್ಯುತಪ್ರೇಕ್ಷ್ಯ ವರೇಣ್ಯರು ಆಶ್ಚರ್ಯ ಚಕಿತರಾದರು. ಹಿರೇ ಯತಿಗಳು ಬಹಳ ಸಂತೋಷ ಪಟ್ಟರು. ಶ್ರೀ ಮಧ್ವ ಮುನೀಂದ್ರರು ತಮ್ಮ ಪೂರ್ವಾಶ್ರಮದ ಮನೆಯಲ್ಲಿದ್ದ ವೃಷಭ ರಾಜನನ್ನು ತಮ್ಮ ಮಠಕ್ಕೆ ಕರೆಸಿಕೊಂಡು, ಅದರ ಆರೈಕೆ ತಾವೇ ನೋಡುತ್ತಿದ್ದರು.

ಜೇಷ್ಠಯತಿ ವರ್ಯೆಣ್ಯರು ಕೆಲವು ವರ್ಷಗಳಾ ನಂತರ ಶ್ರೀಹರಿಯ ಪುರಕ್ಕೆ ತೆರಳಿದರು. ಆಗ ಕಿರಿಯ ಗುರುಗಳು ಜೇಷ್ಠಗುರುಗಳ ಉತ್ತರಕ್ರಿಯೆಗಳನ್ನು ಸಾಂಗವಾಗಿ ನೆರವೇರಿಸಿದರು. ಇಷ್ಟೆಲ್ಲ ಕಾರ್ಯ ಭಾರವನ್ನು ಎದೆ ಕುಗ್ಗದೆ ಧೈರ್ಯವಾಗಿ ನೆರವೇರಿಸಿದ್ದನ್ನು ಕಂಡ ಮಠದ ಪಂಡಿತರು. " ಇಷ್ಟು ಚಿಕ್ಕ ವಯಸ್ಸಿನಲ್ಲಿ, ಇಂಥ ಸಾಹಾಸವನ್ನು ಮಾಡಿದವರು! ಇವರೊಬ್ಬ ಕಾರಣ ಜನ್ಮದ ಅವತಾರ ಪುರುಷ"ರೆಂದು ಮನಸಾರ ಹೊಗಳಿದರು. ಕೆಲವು ಜನ ಬಾಲಕರು ಶ್ರೀ ಮಧ್ವ ಮುನಿತೀರ್ಥರ ಬಳಿ ವಿದ್ಯಾಭ್ಯಾಸಕ್ಕಾಗಿ ಶಿಷ್ಯತ್ವ ವಹಿಸಲು ಬಂದು ಸೇರಿದರು. ಗುರುಗಳು ಉಡುಪಿಯಲ್ಲೇಯಿದ್ದು, ಪಾಠಪ್ರವಚನಾದಿ ಕಾರ್ಯಕ್ರಮವನ್ನು ಪ್ರಾರಂಭಿಸಿದರು. ಅತಿ ಚುರುಕಾದ ಶಿಷ್ಯರು ಗುರುಗಳು ಭೋಧಿಸುತ್ತಿದ್ದ ಪ್ರಮೇಯಗಳನ್ನು ಅತಿ ಶ್ರದ್ಧಾ ಭಕ್ತಿಗಳಿಂದ ಮನನ ಮಾಡಿ ಕೊಳ್ಳುತ್ತಿದ್ದರು. ಅವರು ಪ್ರತಿ ಪರೀಕ್ಷೆಯಲ್ಲಿ ಪ್ರಥಮ ಶ್ರೇಣಿಯಲ್ಲಿ ಉತ್ತೀರ್ಣರಾಗುತ್ತಿದ್ದರು. ಅದರಂತೆ ಕೆಲವು ಮಂದ ಬುದ್ಧಿಗಳಾದವರು ನಿಧಾನವಾಗಿ ಮುಂದಕ್ಕೆ ಸಾಗುತ್ತಿದ್ದರು.

ಮುಖ್ಯವಾಗಿ ಗಮನಿಸಬೇಕಾದ ಅಂಶವೇನೆಂದರೆ ಗುರುಗಳು ತಮ್ಮ ಪೂರ್ವ ಆಶ್ರಮದ ಸ್ಥಳವಾದ ಪಾಜಕ ಕ್ಷೇತ್ರದಿಂದ ಬಂದ ಎತ್ತನ್ನು ತಮ್ಮ ಎದುರುನಲ್ಲೇ ಇರುವಂತೆ ಶಿಷ್ಯರ ಕೂಡ ಕರೆ ತರಿಸಿ ನಿಲ್ಲಿಸುತ್ತಿದ್ದರು. ಗುರುಗಳು ಶಿಷ್ಯರಿಗೆ ಪಾಠಪ್ರವಚನಾದಿಗಳನ್ನು ನಡೆಸುವಾಗ ತಮ್ಮ ಎದುರಿನಲ್ಲೇ ನಿಂತಿರುವ ಎತ್ತನ್ನೇ ನೋಡುತ್ತ ಅವರಿಗೆ ಬೋಧಿಸುತ್ತಿದ್ದರು. ಶಿಷ್ಯರಲ್ಲಿ ಕೆಲವರು "ಏನು ಗುರುಗಳು ನಮ್ಮ ಕಡೆ ನೋಡದೆ ಎತ್ತನೇ ನೋಡುತ್ತ ಪಾಠ ಹೇಳುತ್ತಾರೆ. ಆಕಸ್ಮಿಕವಾಗಿ ಒಮ್ಮೆ ಎರಡು ಸಲ ನೋಡಿದರೆ ಅಷ್ಟೇನು ಅನಿಸುವದಿಲ್ಲ. ಆದರೆ ಗುರುಗಳು ಸದಾ ಆ ಪಶುವನ್ನೆ ನೋಡುತ್ತಾರೆ. ಈ ದಿನ ಕೇಳಿಯೇ ಬಿಡೊದು" ಎಂದು ತೀರ್ಮಾನಿಸಿದರು. ಆದರೆ ಅವರಲ್ಲಿ ಕೆಲವರು "ಗುರುಗಳು ಎತ್ತು ನೋಡಿದರೇನು? ನಮಗೆ ಅವರಿಂದ ಜ್ಞಾನ ಸಂಪಾದನೆ ಯಾಗಬೇಕು. ಅವರ ಮುಖದಿಂದ ಬಂದ ಪ್ರತಿ ಶಬ್ಧವನ್ನು ನಾವು ಮನಸ್ಸು ಕೊಟ್ಟು ಕಲಿತರಾಯಿತು. ಮಿಕ್ಕ ವಿಷಯ ನಮ್ಮಗಳಿಗೆ ಸಂಬಂಧವಿಲ್ಲ. ವೃಥಾ ಕಾಲಹರಣ ಮಾಡದೆ ಅಭ್ಯಾಸ ಮಾಡಿರಿ. ಗುರುಗಳು ಬರುವ ವೇಳೆ ಆಯಿತು." ಎಂದು ಹಿತವಚನಗಳಾಡಿದರು. ಎಲ್ಲಾ ಶಿಷ್ಯರು ಗುರುಗಳು ಬರುವವರೆಂದು ತಮ್ಮ ಪಾಠದ ಕಡೆಗಮನ ಕೊಟ್ಟು ಅಭ್ಯಾಸ ಮಾಡತೊಡಗಿದರು. ಸ್ವಲ್ಪ ಹೊತ್ತಿನೊಳಗೆ ಆಚಾರ್ಯ ಮಧ್ವರು ಬಂದು ತಮ್ಮ ಸ್ಥಳದಲ್ಲಿ ಆಸೀನರಾಗಿ ಪಾಠ ಪ್ರಾರಂಭಮಾಡುತ್ತಿರುವಂತೆ ವೃಷಭರಾಜನು ಗುರುಗಳ ಎದುರಿನಲ್ಲಿ ಬಂದು ನಿಂತು ಬಿಟ್ಟಿತು ಎತ್ತು ಬರುತ್ತಲೆ ಪಾಠ ಪ್ರಾರಂಭ ಮಾಡಿದರು. ಅಷ್ಟರಲ್ಲೆ ಒಬ್ಬ ಶಿಷ್ಯನು ಎದ್ದು ನಿಂತು "ಗುರುಗಳೇ ನೀವು ಸದಾ ಆ ಪಶುವನ್ನೆ ನೋಡುತ್ತ ಪಾಠ

ಹೇಳುತ್ತಿರುವಿರಿ, ನಮ್ಮ ಕಡೆ ಒಮ್ಮೆಯಾದರು ನೋಡುವುದಿಲ್ಲ ಕಾರಣವೇನು ತಿಳಿಯದು. ಒಮ್ಮೆಯಾದರು ನಮ್ಮನ್ನು ನೋಡುತ್ತ ಪಾಠ ಹೇಳಿರಿ." ಎಂದು ಕೆಲವು ಬಾಲಕರು ಏಕ ಕಂಠದಿಂದ ಕೇಳಿಯೇ ಬಿಟ್ಟರು. ಬಾಲಕರ ಕಡೆ ಮುಖ ತಿರುಗಿಸಿ ಗುರುಗಳು, " ಓಹೋ! ಇದಾ ನಿಮ್ಮ ಸಂದೇಹ! ನೋಡಿ! ನಾನು ಹೇಳುತ್ತಿರುವ ಪಾಠದ ಅಂಶ ಮುಖ್ಯವೋ ? ನಾನು ನಿಮ್ಮನ್ನೆ ನೋಡುವದೆ ಮುಖ್ಯವೋ! ಹೇಳಿರಿ? ನಿಮ್ಮ ಜತೆಯಲ್ಲಿದ್ದ ಹುಡುಗರು ಶ್ರದ್ದೆಯಿಂದ ಪಾಠದ ಕಡೆ ಗಮನ ವಿಟ್ಟು ಪ್ರತಿಸಲ ಉನ್ನತ ಶ್ರೇಣಿಯಲ್ಲಿ ಉತ್ತೀರ್ಣರಾಗುತ್ತಿರುವರು. ನೀವು ಮಾತ್ರ ಇದ್ದಲ್ಲೆ ಇರುವಿರಿ. ನಾವು ಅವರನ್ನು ಸಹ ನೋಡುತ್ತಿಲ್ಲ. ಈಗ ನಿಮ್ಮ ವಿಷಯದಲ್ಲಿ ಹೇಳುವದಾದರೆ ಎದುರಿನಲ್ಲಿದ್ದ ಆ ಪಶುವೇ ಶ್ರೇಷ್ಟವೆಂದು ತೋರುತ್ತದೆ. ಅದು ಏಕಚಿತ್ತದಿಂದ ನನ್ನ ಹೇಳಿಕೆಯನ್ನು ಕೇಳುತ್ತಿದೆ. ನೀವು ಆ ಪಶುವುಗಿಂತ ಕನಿಷ್ಠರೆಂದು ತಿಳಿದುಬಂತು ಎಂದು ನುಡಿದರು.

ಆಗ ಶಿಷ್ಯರೆಲ್ಲ ತಮ್ಮನ್ನು ಕನಿಷ್ಠರೆಂದು, ಎತ್ತೇ ಶ್ರೇಷ್ಠವೆಂದು ನುಡಿದ ಮಾತನ್ನೆ ಮನದಲ್ಲಿ ನೆನಿಯುತ್ತ ಅಂದಿನ ಪಾಠ ಮುಗಿಸಿ, ಸಾಯಂಕಾಲದ ವೇಳೆ ಊರ ಹೊರಗೆ ಆ ದುಷ್ಟ ಯೋಚನೆ ಮಾಡುವವರೆಲ್ಲ ಸೇರಿದರು. ಮಿಕ್ಕವರು ಇವರ ಹಿಂದೆ ಬರಲಿಲ್ಲ. ಆದರೆ ಗುರುಗಳನ್ನೆ ಪ್ರಶ್ನಿಸಿದವರು, " ಎತ್ತಿಗೆ ವಿಷ ಪ್ರಯೋಗ ಮಾಡಿ ಬಿಟ್ಟರೆ ನಾಳಿನ ಪಾಠದ ವೇಳೆಗೆ ಎತ್ತೇ ಇರುವುದಿಲ್ಲ. ನಮ್ಮ ಕಾರ್ಯ ಸುಗಮವಾಗುತ್ತದೆ " ಎಂದು ಯೋಚಿಸಿ ಅರಣ್ಯದ ಕಡೆ ಬಂದು ಹಾವನ್ನು ಹುಡುಕಲು ತೆರಳಿದರು.

ಅರಣ್ಯದಲ್ಲಿ ಗಿಡಗಳ ಒಂದು ಗುಂಪಾದ ಪೊದರಿನಲ್ಲಿ ಒಂದು ಬಹು ದೊಡ್ಡದಾದ ಘಟ ಸರ್ಪವು ಬಂಡೆಯ ತಗ್ಗಾದ ಸ್ಥಳದಲ್ಲಿ ವಿಷವನ್ನು ಕಕ್ಕುತಿತ್ತು. ಬಾಲಕರು ಅದನ್ನು ಕಂಡು ಸಂತಸ ಗೊಂಡು ಅಲ್ಲಿಯೇ ಮರೆಯಾಗಿನಿಂತು ನೋಡುತ್ತಿದ್ದರು. ಆ ಸರ್ಪವು ಈ ಬಾಲಕರನ್ನು ಕಂಡು ವಿಷ ಕಕ್ಕಿತು. ಆ ಮೇಲೆ ಮೆಲ್ಲನೆ ಅರಣ್ಯದ ಕಡೇ ವೇಗವಾಗಿ ಹೊರಟು ಹೋಯಿತು. ಸರ್ಪವು ದೂರಹೋಗುವವರೆಗೆ ನೋಡಿದ ನಂತರ ಬಾಲಕರು ಆ ವಿಷವನ್ನು ದೊಡ್ಡಎಲೆಗಳ ದೊನ್ನೆಯನ್ನು ಮಾಡಿ ಅದರಲ್ಲಿ ಸೇರುವಂತೆ ಮಾಡಿ ಮರಳಿ ಮನೆಗಳಿಗೆ ತಿರುಗಿದರು. ಯಾರು ನೋಡದ ಸ್ಥಳದಲ್ಲಿ ರಾತ್ರಿ ಬಚ್ಚಿಟ್ಟು ಯಾರಮನೆಗವರು ಹೋದರು. ಮರುದಿನ ಬೆಳಿಗ್ಗೆ ಆ ವಿಷದ ದೊನ್ನೆಯನ್ನು ಬಹು ಜಾಗತ್ರೆಯಿಂದ ತಂದು ಎತ್ತು ಮಲಗಿದ್ದ ಸ್ಥಳದಲ್ಲಿ ಹುರಳಿಯ ಡಾಣೆ ಎತ್ತಿಗಾಗಿ ತೆಗೆದಿಟ್ಟ ಬುಟ್ಟೆಯಲ್ಲಿ ಬೆರಸಿ, ಮರಳಿ ಮನಿ ಸೇರಿದರು. ಒಬ್ಬ ಸೇವಕನು ಗುರುಗಳ ಅಪ್ಪಣೆಯಂತೆ ಆ ಡಾಣೆಯ ಪುಟ್ಟಿಯನ್ನು ಎತ್ತಿನ ಮುಂದಿಟ್ಟು ಹೊರಟು ಹೋದನು. ವೃಷಭವು ತನಗಾಗಿಯಿಟ್ಟ ಆಹಾರವನ್ನು ತಿನ್ನುತ್ತಿದ್ದಂತೆ ನೆಲಕ್ಕೆ ಬಿದ್ದು ಹೊರಳಾಡ ತೊಡಗಿತು. ಸ್ವಲ್ಪ ಹೊತ್ತಿನಲ್ಲಿ ಸೇವಕನು ಬಂದು ನೋಡಲು ಎತ್ತು ಶ್ರಮದಿಂದ ಹೊರಳಾಡುತ್ತಿರುವುದನ್ನು ಕಂಡು ಗುರುಗಳಿಗೆ ಅಲ್ಲಿಯ ಎತ್ತಿನ ಪರಿಸ್ಥಿತಿಯನ್ನು ತಿಳಿಸಿದನು. ಆ ಕ್ಷಣದಲ್ಲೆ ಗುರುಗಳು ಬಂದು ಎತ್ತಿನ ಮುಖ ಲಕ್ಷಣ ಕಂಡು ವಿಷ ಪ್ರಯೋಗವಾದಂತೆ ಸೂಚನೆ ಯಾಯಿತು. ಆಚಾರ್ಯ

ಮಧ್ವಮುನಿಗಳು ಏಕಾಗ್ರತೆಯಿಂದ ಭಗವಂಥನನ್ನು ಪ್ರಾರ್ಥಿಸಿ ಆ ಕ್ಷಣದಲ್ಲಿ ದ್ವಾದಶ ಸ್ತೋತ್ರ ರಚಿಸಿ ಪರಿಸುತ್ತ ನೀರನ್ನು ಎತ್ತಿನ ಮೇಲೆ ಪ್ರೋಕ್ಷಣೆ ಮಾಡಿದರು. ಸ್ವಲ್ಪ ಹೊತ್ತಿನ ಮೇಲೆ ಮೈಮುರಿಯುತ್ತ ನಿದ್ದೆಯಿಂದ ಎದ್ದಂತೆ ಶಿರವನ್ನು ಝೂಡಿಸಿದಂತೆ ಅಲುಗಾಡಿಸಿ ಕಣ್ಣು ತೆರದು ಚುರಕಾಗಿ ಅತ್ತಿತ್ತ ಸಮಾಧಾನದಿಂದ ನೋಡಹತ್ತಿತು.

ಎತ್ತಿನ ಶಿರದಲ್ಲಿದ್ದ ವಿಷವು ಸಂಪೂರ್ಣವಾಗಿ ಜೀರ್ಣವಾದ ಸ್ಥಿತಿಯನ್ನು ಕಂಡು ಗುರುಗಳು ಸಂತೋಷ ಪಟ್ಟರು. ಎಂದಿನಂತೆ ದಿನ ನಿತ್ಯದ ಕಾರ್ಯಕ್ರಮ ನಡೆಯಿತು. ಪಾಠಶಾಲೆಯಲ್ಲಿ ಶಿಷ್ಯರು ತಮ್ಮಲ್ಲಿ ತಾವು "ಇಂದು ಎತ್ತು ಬರುವುದಿಲ್ಲ" ವೆಂದು ಸಂತೋಷ ಪಟ್ಟು ಪಾಠವನ್ನು ಮಾಡುತ್ತಿದ್ದರು. ಆದಿನ ಗುರುಗಳು ಪಾಠ ಶಾಲೆಗೆ ಸ್ವಲ್ಪ ತಡವಾಗಿ ಬಂದರು. ಅವರ ಹಿಂದೆಯೇ ಎತ್ತು ಬಂದು ತನ್ನ ಸ್ಥಾನದಲ್ಲಿ ನಿಲ್ಲುವ ಬದಲು ಮಲಗಿತು. ದುಷ್ಟ ಬುದ್ಧಿಗಳಾದ ಬಾಲಕರಿಗೆ ಆಶ್ಚರ್ಯವಾಯಿತು. ಅವರ ಗುರುಗಳನ್ನುದ್ದೇಶಿಸಿ. " ಗುರುಗಳೆ ಈ ಪಶುವು ನಿಲ್ಲದೇ ಇಂದು ಮಲಗಿ ಬಿಟ್ಟಿತು. ಅದರ ಆರೋಗ್ಯ ಸ್ವಲ್ಪ ಕೆಟ್ಟಂತೆ ಇದೆ? ಪಾಪ ಏನು ಕಾರಣವೊ"? ಎಂದು ಕನಿಕರದ ಮಾತು ಗಳನ್ನಾಡಿದರು. ಹಸನ್ಮುಖರಾಗಿ ಗುರುಗಳು ಬಾಲಕರಿಗೆ ಈ ರೀತಿಯಾಗಿ ತಿಳಿಸಲು ಪ್ರಾರಂಭಿದರು." ಪ್ರಪಂಚದಲ್ಲಿ ಕೆಲವು ದುಷ್ಟ ಜೀವಿಗಳು ಕಲಿಯಾ ವೇಶದಿಂದ ಜನ್ಮತಾಳಿ ಎಲ್ಲಾ ಸುಜೀವಿಗಳೊಂದಿಗೆ ಸೇರಿ ತಾವು ಕೂಡ ಸುಜನರೋಪಾದಿಯಲ್ಲಿ ಸಂಚರಿಸುತ್ತ ಇರುತ್ತಾರೆ. ಅವರು ಭಕ್ತರು ಮಾಡುತ್ತಿರುವ ಸತ್ಕಾರ್ಯಗಳಿಗೆಲ್ಲ ವಿಘ್ನವ ತಂದೊಡ್ಡುತ್ತಿರುತ್ತಾರೆ. ಕೆಲವು ವೇಳೆಯಲ್ಲಿ ತಮ್ಮಗೆ ಸಮ್ಮತವಾಗದೆ ಅಸಾಧ್ಯವಾದಲ್ಲಿ ಧರ್ಮಕಾರ್ಯ ಮಾಡುವವರನ್ನೆ ಹತ್ಯ ಮಾಡುವಧಕ್ಕಾದರು ಹಿಂಜರಿಯುವದಿಲ್ಲ. ಅವರಿಗೆ ಪಾಪ ಪುಣ್ಯದ ಅರಿವು ಇರುವುದಿಲ್ಲ. ಸದಾ ಅವರಿಗೆ ಪಾಪ ಕೃತ್ಯಗಳನ್ನೇ ಮಾಡುವ ಯೋಚನೆಯೇ ಗುರಿಯಾಗಿರುತ್ತದೆ. ಅಂದಮೇಲೆ ಅವರು ಒಳ್ಳೆಯ ಕೆಲಸಗಳನ್ನು ಮಾಡುವದಿಲ್ಲ. ಇದಿರಲಿ ನಿಮ್ಮ ಅಭ್ಯಾಸದ ಕಾರ್ಯಕ್ರಮ ಸುಗಮವಾಗಿ ನಡೆದು ಹೋಗಲು ನೀವುಗಳು ಭಗವಂತನಲ್ಲಿ ಚಿತ್ತ ವಿಟ್ಟು ಸದ್ಬುದ್ಧಿ ಕೊಡೆಂದು ಶ್ರೀಹರಿಯನ್ನು ಪ್ರಾರ್ಥಿಸಿರಿ", ಎಂದು ಹಿತವಚನಗಳನ್ನಾಡಿ ಪಾಠವನ್ನಾರಂಭಿಸಿದರು.

ಕೆಲವು ದಿನಗಳಿದ್ದು ಸಂಚಾರದ ನಿಮಿತ್ತ ಶಿಷ್ಯ ಸಮೇತರಾಗಿ ತಾವು ರಚಿಸಿದ ಮೂವತ್ತೇಳು ಮಹಾ ಪವಿತ್ರಗಳಾದ ಗ್ರಂಥಗಳನ್ನು ಎತ್ತಿನ ಮೇಲೆ ಹೇರಿ ಕೊಂಡು ಹೋಗುತ್ತಿದ್ದರು. ಸಂಚಾರ ಮಾಡುತ್ತ ಉತ್ತರ ಭಾರತ ಮತ್ತು ಪೂರ್ವ ದಿಕ್ಕಿನ ಕೆಲವು ಭಾಗಗಳಲ್ಲಿ ಸಂಚರಿಸಿ ಮರಳಿ ಉಡುಪಿ ಕ್ಷೇತ್ರಕ್ಕೆ ತಿರುಗಿ ಬಂದರು. ವಯೋವೃದ್ಧ ವೃಷಭ ಕೆಲವುದಿನಗಳಲ್ಲೇ ತನುವಿನ ಉಸಿರು ಬಿಟ್ಟಿತು.

ವೃಷಭ ರಾಜನ ಅಂತ್ಯ ಸಂಸ್ಕಾರ ಮುಗಿಸಿದರು. ಎತ್ತಿನ ಸೇವೆಯನ್ನು ನೆನೆದು ಗುರುಗಳಿಗೆ ಕೆಲವು ದಿನಗಳ ವರೆಗೆ ಮನಸ್ಸೆ ಒಂದು ರೀತಿಯಲ್ಲಿ ಒಬ್ಬ ಆತ್ಮೀಯನನ್ನು ಕಳೆದು ಕೊಂಡಂತೆ ಮನ ಪರಿತಪಿಸಿತು. ಅದೇ ಆತ್ಮೀಯದ ದುಃಖ ಆನಂದ ತೀರ್ಥರು. ಪೂರ್ಣ ಪ್ರಜ್ಞರು ಮಧ್ವ ಮತಸ್ಥಾಪಿತರು, ಸಂತೋಷ ತೀರ್ಥರು, ಶ್ರೀಮನ್ ಮಧ್ವಚಾರ್ಯರೆಂಬ ಬಿರುದಾಂಕಿತರಾಗಿ ಉಡುಪಿ ಕ್ಷೇತ್ರದಲ್ಲಿ ಒಂದು ದಿನ ದೂರದಲ್ಲಿದ್ದ ಮಳಪಿ ಸಮುದ್ರದಲ್ಲಿ ಸ್ನಾನಮಾಡಿ ಧ್ಯಾನದಲ್ಲಿರುವಾಗ

ಹೋ ರೆಂದು ಭೋರ್ಗ್ಗರೆಯುತ್ತಿರುವ ಸಮುದ್ರ ಮಧ್ಯ ಬಹು ದೂರದಿಂದ " ಕಾಪಾಡಿ, ಕಾಪಾಡಿ" ಎಂಬ ಆರ್ತನಾದ ಧ್ಯಾನ ಮಗ್ನರಾದವರ ಕರ್ಣಗಳಿಗೆ ಸೋಕಿತು. ತಕ್ಷಣದಲ್ಲಿ ಶಿರದ ಮೇಲೆ ಹೊದ್ದಿರುವ ಕಾವಿ ವಸ್ತ್ರಕ್ಕೆ "ಅವರನ್ನು ರಕ್ಷಿಸು" ಎಂದು ಆಜ್ಞೆಗೈದರು "ಮರುಕ್ಷಣವೇ ಆ ವಸ್ತ್ರ ಶರವೇಗದಿಂದ ಕಡಲ ಮಧ್ಯಕ್ಕೆ ಹೋಗಿ ಗಾಳಿಯ ವೇಗಕ್ಕೆ ಒಂದು ಪರ್ವತ್ತಕ್ಕೆ ಒಡೆದು ಚೂರಾದ ನಾವೆಯನ್ನು ತಳಭಾಗದಿಂದ ಸಂಪೂರ್ಣವಾಗಿ ವಸ್ತ್ರದ ಮಧ್ಯಭಾಗಕ್ಕೆ ಬರುವಂತೆ ಮಾಡಿಕೊಂಡು ಮಧ್ವಚಾರ್ಯರಿದ್ದ ತೀರಕ್ಕೆ ಸೇರಿತು. ಇನ್ನು ಧ್ಯಾನ ಮಗ್ನರಾಗಿದ್ದ ಪೂರ್ಣ ಪುಜ್ಞರನ್ನು ನಾವೆಯಿಂದ ತೀರಕ್ಕೆ ಇಳುದು ಬಂದು ದಡದ ಮೇಲೆ ಏಕಾಗ್ರದಲ್ಲಿ ಕುಳಿತಿದ್ದವರನ್ನು ಕಂಡು ಅತಿಭಕ್ತಿಯಿಂದ ಕರಗಳನ್ನು ಜೋಡಿಸಿ ಮೌನವಾಗಿ ವ್ಯಾಪಾರಕ್ಕೆ ದೇಶ ವಿದೇಶಗಳಿಂದ ಬಂದ ಕೋಟ್ಯಾದೀಶ್ವರರಾದ ಸಾಹುಕಾರರು ಸ್ವಲ್ಪ ಹೋತ್ತುನಿಂತಿದ್ದರು ಆಮೇಲೆ ಬಹಿರ್ಮ್ಮುಖರಾಗಿ ತಮ್ಮೆದುರಿನಲ್ಲಿಯ ಪ್ರಾಯಾಣಿಕರನ್ನು ಸಂತೋಷ ತೀರ್ಥರು ಕಂಡು ಆಶೀರ್ವದಿಸಿ" ಏನಪ್ಪಾ ಎಲ್ಲರೂ ಸುರಕ್ಷಿತರಾಗಿ ತೀರಕ್ಕೆ ತಲುಪಿದಿರಾ!" ಎಂದು ವಿಚಾರಿಸಿದರು ಎಲ್ಲರು ಸಂತೋಷದಿಂದ ಶಿರಸಾಷ್ಠಾಂಗವೆರಗಿ "ಎಲ್ಲಾ ನಿಮ್ಮ ದಯ ಬುದ್ಧಿ! ಇಷ್ಟು ಜನ ಶ್ರೀಮಂತರಾದ ನಮ್ಮನ್ನು ಕಡು ಕರುಣೆಯಿಂದ ರಕ್ಷಿಸಿದಿರಿ. ನಾವುಗಳು ನಿಮಗೆ ಎಂಥಾ ಸೇವೆಸಲ್ಲಿಸ ಬೇಕೋ ತೋಚದಾಗಿದೆ. ನಮ್ಮ ನಾವೆಯಲ್ಲಿ ಕೋಟಿಗಟ್ಲೆ ಬೆಲೆ ಬಾಳುವ ನವರತ್ನಗಳ ರಾಶಿವುಂಟು, ಬೇಕಾದಷ್ಟು ತಾವು ಸಂತೋಷದಿಂದ ತೆಗೆದು ಕೊಳ್ಳಿ" ಇದು ನಮಗೆ ಸಂತೋಷವೆಂದು" ಕಡು ವಿನಯದಿಂದ ಶಿರಬಾಗಿ ಪ್ರಾರ್ಥಿಸಿದರು. ಪ್ರಯಾಣಿಕರ ಮಾತನ್ನು ಕೇಳಿದ ಗುರುಗಳು ಹಸನ್ಮುಖರಾಗಿ " ಶ್ರೀಮಂತ ಮಹಾಶಯರೇ! ನಾವು ಸರ್ವಸಂಗ ಪರಿತ್ಯಾಗ ಮಾಡಿದ ಯತಿಗಳು. ನಿಮ್ಮ ಐಶ್ವರ್ಯದಿಂದ ನಮಗೇನಾಗಬೇಕಾಗಿದೆ. ನೀವು ಸಂತೋಷದಿಂದ ನಮ್ಮಮಠಕ್ಕೆ ಬಂದು. ಇನ್ನೊಂದು ನಾವೆ ಸಿಗುವವರೆಗೆ ನಮ್ಮಲ್ಲಿಯೇ ಇದ್ದು ತೀರ್ಥ ಪ್ರಸಾದ ಸ್ವೀಕರಿಸಿರಿ" ಎಂದು ನುಡಿದರು. ಆಗ ವ್ಯಾಪಾರಿಗಳು ಬಹು ಪ್ರಕಾರವಾಗಿ, ಯೇನಾದರು ಸ್ವೀಕರಿಸಲೇ ಬೇಕೆಂದು ಗುರುಗಳನ್ನು ಪ್ರಾರ್ಥಿಸಿದರು. ಆಗ "ನೀವು ನಮಗೇನಾದರು ಕೊಡಲೇ ಬೇಕೆಂದು ಬಲವಂತ ಮಾಡುತ್ತಿರುವಿರಿ. ಅಂದ ಮೇಲೆ ನಿಮ್ಮ ನಾವೆಯ ಮಧ್ಯದಲ್ಲಿರುವ ಮೂರು ಮಣ್ಣಿನ ವುಂಡಿಗಳನ್ನು ಕೊಟ್ಟು ಬಿಡಿ ಅದರಲ್ಲಿ ನಮ್ಮ ಸರ್ವಸ್ವವು ಇದೆ? ಸಂದೇಹಿಸದೆ ತಂದು ನನ್ನ ಮುಂದೆ ಇಟ್ಟುಬಿಡಿ. ಅದರಲ್ಲೆನಿದೇ ಎಂಬುದು ಈಗಲೇ ನಿಮ್ಮಗಳಿಗೆ ತೋರುತ್ತೇವೆ. ಬೇಗತಂದು ಬಿಡಿ" ಎಂದು ನಗುತ್ತ ನುಡಿದರು. ವ್ಯಾಪಾರಿಗಳೆಲ್ಲರು ಆಶ್ಚರ್ಯ ಪಟ್ಟು ಆ ಮಣ್ಣಿನ ವುಂಡಿ ತಂದಿಟ್ಟರು. ಸರ್ವಜ್ಞರಾದ ಯತಿವರೇಣ್ಯರು ಸಮುದ್ರದ ನೀರನ್ನು ತಮ್ಮ ಹಸ್ತದಲ್ಲಿ ಸ್ವಲ್ಪ ತೆಗೆದು ಕೊಂಡು ಆ ಮಣ್ಣಿನ ಹೆಂಟಗಳ ಮೇಲೆ ಪ್ರೋಕ್ಷಿಸಿದರು. ಕ್ಷಣದಲ್ಲೇ ಆ ಮಣ್ಣಿನ ವುಂಡಿಗಳು ಒಡೆದು ಬಿಟ್ಟವು. ಒಂದರಲ್ಲಿ ಶ್ರೀಕೃಷ್ಣನು ಕಡ ಗೋಲು ಹಿಡಿದು ನಿಂತ ವಿಗ್ರಹ ಎರಡನೆಯದಲ್ಲಿ ಶ್ರೀಬಲರಾಮನ ಪ್ರತಿಮೆ ಇತ್ತು ಮೂರನೇ ವುಂಡಿಯಿಂದ ಆದಿಶಕ್ತಿಯಾದ ದುರ್ಗಾದೇವಿ ವಿಗ್ರಹ ಕಾಣಿಸಿಕೊಂಡಿತು.

ಶ್ರೀಮನ್ಮಧ್ವಯತೀಂದ್ರರು ಪ್ರಯಾಣಿಕರನ್ನು ಕಂಡು "ಈಗ ನೀವೆನನ್ನುವಿರಿ. ನಿಮ್ಮಂಥ ಮಹಾನ್ಪುಣ್ಯ ಜೀವರು ಮತ್ತೊಬ್ಬರಿಲ್ಲ. ನಿಮ್ಮನ್ನು ಈ ವಿಪತ್ತಿನಿಂದ ಕಾಪಾಡಿದವರು ಈ

ಮೂವರು. ನೀವು ಸಾಕ್ಷಾತ್ಭಗವಂತನನ್ನೇ ಕರೆದು ಕೊಂಡು ಬಂದ ಸುಜೀವಿಗಳು. ನಾನು ಕೇಳಿದ ಮಾತ್ರದಲ್ಲೇ ಈ ಮೂವರನ್ನು ನನ್ನಗೆ ಒಪ್ಪಿಸಿ ಬಿಟ್ಟಿರಿ. ಇದಕ್ಕಿಂತ ಹೆಚ್ಚಿನ ಸಂಪತ್ತು ಮತ್ತೇನಿದೆ! ಆದ ಕಾರಣ ನೀವುಗಳೆಲ್ಲರು ಇಂದು ನಮ್ಮ ಮಠಕ್ಕೆ ಬಂದು ತೀರ್ಥ ಪ್ರಸಾದ ಸ್ವೀಕರಿಸಲೇ ಬೇಕೆಂದು" ಹೇಳಿ ಎಲ್ಲರು ಮಠಕ್ಕೆ ಹೋರಟರು. ಗುರುಗಳು ಮೂರು ವಿಗ್ರಹಗಳನ್ನು ತಾವೇ ಹಿಡಿದು ಕೊಂಡು ಹೋಗುತ್ತಿರಲು ಬಲರಾಮನ ವಿಗ್ರಹ ಸ್ವಲ್ಪ ಕೈಜಾರಿ ನೆಲದ ಮೇಲೆ ಬಿದ್ದಿತು. ಆಗ ಗುರುಗಳು ಬಲರಾಮ ದೇವರನ್ನು ಅಲ್ಲೆ ಪ್ರತಿಷ್ಠೆ ಮಾಡಿ " ವಡ ಭಾಂಡೇಶ್ವರ " ನೆಂದು ನಾಮಕರಣ ಮಾಡಿದರು ಅಲ್ಲಿಂದ ಉಡುಪಿಗೆ ಬಂದರು. ಅಲ್ಲಿ ಶ್ರೀ ಕೃಷ್ಣನನ್ನು ಪ್ರತಿಷ್ಠೆ ಮಾಡಿದರು. ಪಾಜಕ ಕ್ಷೇತ್ರಕ್ಕೆ ಹೋಗುವ ದಾರಿಯಲ್ಲಿ ಬೆಟ್ಟ ಒಂದರ ಮೇಲೆ ದುರ್ಗಾ ದೇವಿಯ ಸ್ಥಾಪನೆಯಾಯಿತು. ಯಾತ್ರೀಕರು ಮೂರು ಕಡೆ ಪ್ರತಿಷ್ಠಾಪನಾ ಕಾರ್ಯಕ್ರಮವನ್ನು ಶ್ರೀಮಧ್ವಾಚಾರ್ಯರಿಂದ ನಡೆದದ್ದು ಕಣ್ಣಾರೆ ಕಂಡು ಧನ್ಯರಾದವೆಂದು, ಮತ್ತು ತಮ್ಮಗಳ ಸಂಪಾದನೆ ದೇವರ ಸೇವೆಗೆಂದು ಸಾಕಷ್ಟು ಹಣ ಸಮರ್ಪಿಸಿ, ಮುಂದೆ ತಮ್ಮ ಪ್ರಯಾಣವನ್ನು ಬೆಳಿಸಿದರು.

ಶ್ರೀ ಮಧ್ವಾಚಾರ್ಯರು ಉಡುಪಿಯಲ್ಲಿ ಶ್ರೀಕೃಷ್ಣಮಠವೆಂದು ಸ್ಥಾಪನೆ ಮಾಡಿ ಶ್ರೀಕೃಷ್ಣನ ಸೇವೆಗಾಗಿ ಅಷ್ಟ ಮಠಗಳನ್ನು ಸ್ಥಾಪನೆ ಮಾಡಿನಿರಂತರ ಪರಮಾತ್ಮನ ಸೇವೆ ನಡೆಯುವಂತೆ ಮಾಡಿ ಕೆಲವು ಕಾಲ ತಾವೆ ಪೂಜಾದಿ ಕಾರ್ಯಕ್ರಮಗಳನ್ನು ಪದ್ಧತಿ ಪ್ರಕಾರ ಏರ್ಪಾಟು ಮಾಡಿದರು. ಆಗ ಆಚಾರ್ಯರಿಗೆ ಬದರಿಕಾಶ್ರಮಕ್ಕೆ ಹೋಗಿಬರುವ ಅಪೇಕ್ಷೆ ಆಯಿತು. ಅಷ್ಟಮಠದ ಯತಿಗಳನ್ನು ತಮ್ಮ ಸಮ್ಮುಖಕ್ಕೆ ಕರೆಯಿಸಿ ಸರದಿ ಪ್ರಕಾರ ಸೇವೆಸಲ್ಲಿಸಲು ತಿಳಿಸಿ ತಮ್ಮ ಬದರಿ ಪ್ರಯಾಣದ ಸುದ್ದಿ ತಿಳಿಸಿದರು. ಮರುದಿನ ಶ್ರೀಕೃಷ್ಣನ ಪೂಜಾ ತೀರ್ಥ ಪ್ರಾಸಾದಗಳಾದ ನಂತರ ಶ್ರೀಮನ್ಮಧ್ವ ಮುನಿಗಳು ಬದರಿಗೆ ಪ್ರಯಾಣ ಬೆಳೆಸಿದರು.

|| ಓಂ ಶಾಂತಿ ಶಾಂತಿ ಶಾಂತಿ ||

ಎತ್ತನ್ನು ನೋಡುತ್ತ ಆಚಾರ್ಯರು ಬಾಲಕರಿಗೆ ಹೇಳುತ್ತಿದ್ದ ಪಾಠವನ್ನು ಕೇಳುತ್ತಿದ್ದ ಆ ವೃಷಭ ಏಕಾಗ್ರತೆಯಿಂದ ಕೇಳುತ್ತ ಗತ ಜನ್ಮದಲ್ಲಿ ತಾವು ಅರ್ಜುನರಾಗಿ ಅಣ್ಣಂದಿರಾದ ಭೀಮಸೇನ ದೇವರನ್ನು ಕೇಳಿದ ಪ್ರಶ್ನೆ ಈಗ ಮಧ್ವಾಚಾರ್ಯರಾಗಿ ಬಂದ ಅಣ್ಣ ಭೀಮಸೇನರೇ ಇವರು. ಈಗ ನನ್ನ ಪ್ರಶ್ನೆಯ ಉತ್ತರ ಸಿಕ್ಕಿತು ಎಂದು ಮನದಲ್ಲೇ ಸಂತಸದಿಂದ ಧ್ಯಾನಿಸುತ್ತಿದ್ದ ವೃಷಭವೇ **"ಅರ್ಜುನ"**.

3ನೇ ಭಾಗ



# ಶ್ರೀ ಧೊಂಡೊ ಪಂತರು
# ಮುಂದೆ
# ಶ್ರೀ ಜಯತೀರ್ಥ ಯತಿವರ್ಯರು

|| ಶ್ರೀ ಮೂಲ ರಾಮೋ ವಿಜಯತೇ ||

|| ಶ್ರೀ ಮಧ್ವ ಗುರುವೇ ನಮಃ ||

## ಶ್ರೀಮದಕ್ಷೋಭ್ಯ ತೀರ್ಥ ಶ್ರೀ ಪಾದಂಗಳವರ ಮುಖ್ಯ ಶಿಷ್ಯರು

# ಶ್ರೀ ಧೊಂಡೊ ಪಂತರು

ಮಂಗಳವೇಡಿ ಸಂಸ್ಥಾನದ ಮಂಡಲಾಧಿಕಾರಿಗಳು ಶ್ರೀ ರಘುನಾಥ ಪಂತರು. ಅವರೊಬ್ಬ ದಂಡನಾಯಕರಂತೆ ತಮ್ಮ ರಾಜ್ಯ ವಿಸ್ತರಣೆ ಮಾಡಿಕೊಂಡಿದ್ದ ಚಿಕ್ಕ ಸ್ವತಂತ್ರ ದೊರೆಗಳು. ಶುದ್ಧವಾದ ಮಧ್ವ ಮತದ ವೈಷ್ಣವ ಮತದ ಬ್ರಾಹ್ಮಣ ವಂಶಜರು. ಅವರ ಏಕೈಕ ಪುತ್ರಾರಾದ ಧೋಂಡೊಪಂತರು. ಯುವರಾಜರಂತೆ ವುಂಡಾಡಿ ಅತ್ತ ಇತ್ತ ಅಲಿದಾಡದೆ ರಾಜ ರೀವಿಯ ಸ್ವಭಾವದವರು, ಅವರ ತಂದೆ ರಘುನಾಥರಿಗೆ ಬಲಗೈ ಇದ್ದಂತೆ ರಾಜಕೀಯ ವ್ಯವಹಾರದಲ್ಲಿ ಬಲು ಚುರುಕಿನಿಂದ ಸಹಾಯ ಮಾಡುತ್ತಿದ್ದರು. ಯುದ್ಧ ಕುಶಲರಾದ ಮಹಾಯೋಧರಾಗಿಯು ಇದ್ದರು. ಒಂದು ದಿನ ಪರಕೀಯ ರಾಜರು ತಮ್ಮ ಪರಿಸರದ ಗ್ರಾಮಗಳಿಗೆ ಹತ್ತಿರವಾದ ಪ್ರಾಂತಗಳ ಮೇಲೆ ದಾಳಿ ಮಾಡಲು ಬಂದ ವಾರ್ತೆ ಕೇಳಿ,. ಶೂರರಾದ ಯುದ್ಧ ಯೋಧರು ಎಲ್ಲಾ ಸನ್ನಾಹಯುಕ್ತರಾಗಿ ಅವರ ಮೇಲೆ ಯುದ್ಧಕ್ಕೆ ತೆರಳಿದರು. ಆಗ ಅವರಿಗೆ ಒಳ್ಳೆ ಪ್ರಾಯ ಪ್ರಾಪ್ತಿಯಾಗಿತ್ತು. ಇಬ್ಬರು ಸತಿಯರನ್ನು ಮದುವೆಯಾಗಿ ಕೆಲವೇ ಮಾಸಗಳಾಗಿದ್ದವು.

ಯುದ್ಧ ಮಾಡುವ ಕುತೂಹಲ ಹೆಚ್ಚಾಗಿರುವದರಿಂದ ಹೊರಟೇ ಬಿಟ್ಟರು. ಮೂರು ದಿನ ಶತೃ ಸೈನ್ಯದೊಡನೆ ಘೋರ ಯುದ್ಧ ನಡೆಯಿತು. ಶತೃ ಸೈನ್ಯ ಪರಾಜಯ ಹೊಂದಿ ಪಲಾಯನ ಮಾಡಿದರು. ಧೋಂಡೊಪಂತರ ಯುದ್ಧ ಕುಶಲತೆಗೆ ಶತೃಗಳು ಬೆರಗಾದರು. ಶತೃಗಳಗೆ ಉಸಿರಾಡಲು ಬಿಡದೆ ಬೆನ್ನಹತ್ತಿ ಅತಿ ಚಾಕಚಕ್ಯದಿಂದ ಹೊಡೆದೊಡಿಸಿದರು. ಆಗ ಅವರು ಗೆದ್ದು ಸ್ವಾಧೀನ ಪಡಿಸಿಕೊಂಡ ಗ್ರಾಮ ಮಳಖೇಢ. ಯುದ್ಧ ಮಾಡಿ ಜಯ ಭೇರಿ ಹೊಡಸಿಕೊಂಡು ಮಂಗಳ ವೇಡಿಗೆ ಹಿಂದಿರುಗಿ ಬರುತ್ತಿರಲು. ಭೀಮಾನದಿಯನ್ನು ದಾಟಿ ಮಂಗಳವೇಡಿ ಗ್ರಾಮಕ್ಕೆ ಹೋಗಬೇಕು. ನದಿಗೆ ಪಂತರ ಸ್ವಗ್ರಾಮಕ್ಕೆ ಸುಮಾರು ಎರಡು ಹರದಾರಿ ದೂರವಿರಬಹುದು. ಸೈನ್ಯ ಮುಂದೆ ಮುಂದೆ ಸಾಗಿ ಹೋಗುತ್ತಿತ್ತು. ಪಂತರು ಮಾತ್ರ ಅತಿ ಸಂತೋಷದಿಂದ ಸಾವಕಾಶದಿಂದ ಅತ್ತಿತ್ತ ಪ್ರಕೃತಿಯನ್ನು ನೋಡುತ್ತ ಹೊರಟಿದ್ದರು. ಸೈನ್ಯ ನದಿಯ ಹತ್ತಿರ ಕುದುರೆಗಳನ್ನಿಳಿದು ಕುದುರೆಗಳಿಗೆ ನೀರು ಕುಡಿಸಿ ತಾವು ನೀರು ಕುಡಿದು ಮುಂದಕ್ಕೆ ಸಾಗಿಹೋದರು. ಸೈನಿಕರೆಲ್ಲ ಸ್ವಲ್ಪ ದೂರಹೋದ ಮೇಲೆ ಪಂತರು ನದಿ ಹತ್ತಿರ ಕುದುರೆಯನ್ನಿಳಿಯದೆಯೆ ಅಶ್ವವನ್ನು ನೀರಿನಲ್ಲಿ ಹೋಗುವಂತೆ ಹೊಡೆದು. ಮಧ್ಯ ನದಿಯಲ್ಲಿ ತಾವು ನೀರಿಗೆ ಭೊಗ್ಗಿ, ಬಾಯಿಯಿಂದಲೆ ನೀರು ಕುಡಿಯುತ್ತಿರಲು, ಎಲ್ಲಿಂದಲೊ ಒಂದು ಮಾತು ಕೇಳಿಸಿತು. ಅದೇನೆಂದರೆ "**ಕಿಂಪಶು**

ಪೂರ್ವಜನ್ಮ" ಎಂದು, ಧೊಂಡೋಪಂತರು ನೀರು ಕುಡಿಯದನ್ನೆ ಬಿಟ್ಟು ಶಿರವೆತ್ತಿ ನಾಲ್ಕು ಕಡೆಗಳಲ್ಲಿ ನೋಡಿದರು. ಏನೂ ಕಾಣಲಿಲ್ಲ. ಪುನಃ ಪುನಃ ಅದೇ ಮಾತು ಕೇಳಿಸುತ್ತಿತ್ತು. ಮರು ಕ್ಷಣದಲ್ಲಿ ಅಶ್ವದ ಮೇಲಿಂದ ನಡು ನೀರಿನಲ್ಲಿ ಇಳಿದು. ಆ ಮಾತಿನ ಧ್ವನಿ ಬರುವ ಕಡೆ ನಡೆದರು. ತೀರಕ್ಕೆ ಸೇರಿದರು. ತಮ್ಮ ದೀಪದ ಮೇಲಿದ್ದ ಬಟ್ಟೆ ತುಂಬಾ ತೊಯದಿದ್ದವು. ನೀರು ಬಸಿಯುತ್ತಿತ್ತು ನದಿದಂಡೆಯ ಮೇಲೇರಿ ನೋಡಿದರು. ಅದು ಬಹು ಪ್ರಶಾಂತವಾದ ಸ್ಥಳ ವೈಶಾಖ ಮಾಸದಲ್ಲಿ ಸಹ ಅಲ್ಲಿದ್ದ ವೃಕ್ಷಗಳ ಛಾಯಕ್ಕೆ ಬಿಸಿಲಾಗಲಿ, ತಾಪವಾಗಲಿ ಆಗುತ್ತಿರಲಿಲ್ಲ. ಅದು ಒಂದು ಪ್ರಶಾಂತವಾದ ಯತಿಗಳ ಆಶ್ರಮವಾಗಿತ್ತು. ಹಲವರು ಶಿಷ್ಯರು ಏಕಾಗ್ರತೆಯಿಂದ ತಮ್ಮ ಎದುರಿನಲ್ಲಿ ಕುಳಿತಿದ್ದ ತೇಜೋಪುಂಜರಾದ, ಮಹತಪೋಧನರಾದ ಯತಿ ಪುಂಗವರು ಪ್ರಶಾಂತವಾದ, ಹಸನ್ಮುಖದಿಂದ ವೇದಪಾಠವನ್ನು ಬೋಧಿಸುತ್ತಿದ್ದರು. ಧೊಂಡೊಪಂತನು ಗುರುಗಳಿಗೆ ದಂಡ ಪ್ರಣಾಮವನ್ನು ಮಾಡಿ ಸುಮ್ಮನೆನಿಂತು ಬಿಟ್ಟನು. ಯತಿವರೇಣ್ಯರು ಪಂತರನ್ನು ನೋಡಲಿಲ್ಲ. ಮಾತನಾಡಿಸಲ್ಲಿಲ್ಲ. ಒಂದು ತಾಸು ಕಳೆಯಿತು. ಶಿಷ್ಯರು ತಮ್ಮ ಪಾಠವನ್ನು ಮುಗಿಸಿಕೊಂಡು ಆಶ್ರಮದ ಒಳಗೆ ಹೋರಟುಹೋದರು. ಮತ್ತೊಮ್ಮೆ ಪಂತರು ಗುರುಗಳಿಗೆ ಸಾಷ್ಟಾಂಗ ಮಾಡಿ ನಿಂತರು.

ಶ್ರೀ ಶ್ರೀ ಶ್ರೀ 1008 ಶ್ರೀಮದ ಕ್ಷೋಭ್ಯ ತೀರ್ಥ ಯತಿ ಸಾರ್ವಭೌಮರು ತಮ್ಮ ಆಸನದಿಂದ ಎದ್ದುನಿಂತು ಪಂತರನ್ನು ನೋಡಿ "ಬಾ ಮಗೂ! ಇಲ್ಲಿ ಬಾ!" ಎಂದು ದಯಾ ಹೃದಯದಿಂದ ಕರೆದರು. ಪಂತರು ಯತಿಗಳ ಸಮೀಪಕ್ಕೆ ಹೋಗಿ ಮತ್ತೊಮ್ಮೆ ಅವರ ಪಾದಗಳು ಮೇಲೆ ಬಿದ್ದರು. ಗುರುಗಳು ನಕ್ಕು "ಏನಪ್ಪ ನಿನ್ನ ರಾಜ್ಯ ಕ್ಷೇಮವೇ? ನಿನ್ನ ಮಾತಾ ಪಿತೃಗಳು ಕುಶಲರೇ!" ಎಂದು ಕೇಳಿದರು. ಧೊಂಡೊಪಂತರ ಬಾಯಿ ಇಂದ ಒಂದಾದರು ಮಾತು ಹೊರಡಲಿಲ್ಲ. ಏಕಾಧಾರೆಯಾಗಿ ಕಣ್ಣಿಂದ ನೀರು ಸೋರುತ್ತಲೆ ಇದ್ದವು. ಯತಿ ವರೇಣ್ಯರು "ದುಃಖಿಸುವದಕ್ಕೆ ಕಾರಣವೇನಿಲ್ಲ, ಈಗಾದರು ಬಂದೆಯಲ್ಲಾ! ಇದುವರಿಗೆ ಈ ಜನ್ಮದಲ್ಲಿ ಆದ ವಿಷಯಗಳನ್ನು ಬಿಟ್ಟು ಸಿದ್ಧನಾಗಿ ಬಂದಿರುವಿ. ಇನ್ನು ಚಿಂತಿಸಬೇಡ" ಎಂದು ಧೈರ್ಯ ಹೇಳಿದರು. ಮುಂದೆ ಪಂತರು ಏನು ಮಾಡ ಬೇಕು ಅದನ್ನೆ ಹೇಳುತ್ತಿರಲು. ಅತ್ತ ಮಂಗಳವೇಡಿಗೆ ತಲುಪಿದ ಸೈನಿಕರು ರಾಜಪುತ್ರನಿಗೆ ವಿಜಯ ಪ್ರಾಪ್ತಿಯಾದ ವಿವರಗಳನ್ನು ರಘುನಾಥ ಪಂತ ಮಹಾರಾಜನಿಗೆ ಸಂತೋಷದಿಂದ ವರ್ಣನೆ ಮಾಡುತ್ತ ತಿಳಿಸಿದರು. ರಾಜನು ಮಗನ ಆಗಮನವನ್ನು ನಿರೀಕ್ಷಿಸಿದರು. ಮಗನು ಬರುವದಕ್ಕೆ ಆಲಸ್ಯದ ಕಾರಣವನ್ನು ತಿಳಿಯಲು ಸೈನಿಕರನ್ನು ಬಂದ ಹಾದಿಗೆ ತಿರುಗಿ ಕಳುಹಿಸಿದನು. ಸೈನಿಕರು ನದೀ ತೀರಕ್ಕೆ ಬಂದು ನೋಡಲು ತಮ್ಮ ಯುವರಾಜನು ಯತಿವರೇಣ್ಯರ ಮುಂದೆ ಕುಳಿತು. ಅವರು ಹೇಳುತ್ತಿರುವ ಉಪದೇಶವನ್ನಾಲಿಸುತ್ತಿದ್ದರು. ಭಟರು ಎಷ್ಟು ಕೂಗಿ ಕರೆದರು ಯುವರಾಜನಿಗೆ ಕೇಳಿಸಲೇ ಇಲ್ಲ. ಇಲ್ಲಿಯ ವಿವರವನ್ನು ಭಟರು ಮರಳಿ ಹೋಗಿ ರಾಜನಿಗೆ ತಿಳಿಸಿದರು. ರಘುನಾಥ ಪಂತರೆ ಸ್ವಯಂ ಯತಿಗಳಿದ್ದಲ್ಲಿಗೆ ಬಂದು ಭಕ್ತಿಯಿಂದ ವಂದಿಸಿ ನಿಂತರು. ರಾಜನು ಗುರುಗಳಿಗೆ "ಗುರಗಳೇ ಇವನು ನನ್ನ ಏಕೈಕ ಪುತ್ರನು. ಕೆಲವೇ ತಿಂಗಳ ಹಿಂದೆ ಮದುವೆ ಮಾಡಿರುವೆನು.

ಈ ದಿನವೇ ಅವನ ನಿಷೇಕದ ಸಂಭ್ರಮೆ ನಡಿಸುವ ಕಾರ್ಯ ಸಿದ್ಧ ಮಾಡಿ ಅವನ ತಾಯಿ ಬಂಧು ಮಿತ್ರರು ಕಾದಿರುವರು. ದಯವಿಟ್ಟು ಅಪ್ಪಣೆ ಕೊಟ್ಟು ಕಳಿಸಿಬಿಡಿ. ತಡವಾಯಿತು. ಎಲ್ಲರು ಎದುರು ನೋಡುತ್ತಿರುವರು" ಎಂದು ವಿಜ್ಞಾಪಿಸಿ ಕೊಂಡನು. ರಾಜನ ವಿಜ್ಞಾಪನೆಯನ್ನು ಕೇಳಿ ಗುರುವರ್ಯರು. "ಮಗೂ ನಿಮ್ಮ ತಂದೆಯ ಕೋರಿಕೆಯಂತೆ ಮನೆಗೆ ಹೋಗು." ಎಂದು ನುಡಿದರು. ಗುರುಗಳ ಆಜ್ಞೆಯಂತೆ ಯುವರಾಜನು ತಂದೆಯನ್ನು ಅನುಸರಿಸಿ ತಮ್ಮ ಗೃಹಕ್ಕೆ ನಡೆದನು.

ಮಗನ ಆಗಮನವನ್ನು ಕಂಡ ತಾಯಿ ಮತ್ತು ಬಂಧು ವರ್ಗದವರು ಸಂತೋಷದಿಂದ ಅವನನ್ನು ಬರಮಾಡಿಕೊಂಡು, ಪದ್ಧತಿಯಂತೆ ಸುಗಂಧ ಪರಿಮಳ ತೈಲವನ್ನು ಶರೀರಕ್ಕೆ ಹಚ್ಚಿ ಸುಹಾಸಿನಿಯರು ಲಾಂಛನದ ಪದಗಳನ್ನು ಹಾಡುತ್ತ ಅಭ್ಯಂಜನ ಮಾಡಿಸಿದರು. ಅಲಂಕಾರದ ಜರಿವಸ್ತ್ರಗಳನ್ನು ಉಡಿಸಿ ಮುತ್ತಿನ ಹಾರ, ಕಸ್ತೂರಿ ತಿಲಕಗಳಿಂದ ಅಲಂಕರಿಸಿದರು.

ಆ ಮೇಲೆ ಷಡ್ರಸೋಪೇತವಾದ ಭಕ್ಷ್ಯ ಭೋಜ್ಯಗಳನ್ನು ಬಡಿಸಿದರು. ಎಲ್ಲರೂ ಊಟಕ್ಕೆ ಕುಳಿತರು. ಭೋಜನ ಸಮಾರಂಭ ನಡೆದಿತ್ತು. ಆದರೆ ಯುವರಾಜನು ಮಂಕು ಕವಿದವನಂತೆ ಏನನ್ನೂ ಮುಟ್ಟದೆ ಪರಧ್ಯಾನದಲ್ಲಿ ಕುಳಿತು ಬಿಟ್ಟಿದ್ದನು. ಮಗನ ಆ ಪರಿಸ್ಥಿತಿಯನ್ನು ಕಂಡ ತಂದೆ ತಾಯಿಯವರು "ಏನಾಯಿತು ಮಗೂ, ಏನನ್ನೂ ಮುಟ್ಟದೆ ಸುಮ್ಮನೆ ಕುಳಿತಿರುವೆ? ಊಟಮಾಡಪ್ಪ!"ಎಂದು ಬಹುವಿಧದಿಂದ ಬೇಡಿಕೊಂಡರು. ಅವರ ಮಾತು ಕೇಳಿ ಎಚ್ಚೆತ್ತು ಏನೋ ಅಲ್ಪ ಸ್ವಲ್ಪ ವುಂಡವನಂತೆ ಮಾಡಿ ಎಲೆಯ ಮೇಲಿಂದ ಎದ್ದು ಬಿಟ್ಟನು. ಗುರುವರ್ಯರಿಂದ ಬಂದ ಗತ ಜನ್ಮದ ಸ್ಮೃತಿಯಿಂದ ಅವನ ಮನ ತಳಮಳಗೊಂಡಿತ್ತು. ಈ ಸಂಸಾರದ ಬಂಧನದಿಂದ ವಿಮುಕ್ತನಾಗಲು ಹವಣಿಸುತ್ತಿದ್ದನು. ಮನೆಯವರಿಗೆಲ್ಲ ಮಗನ ಈ ಸ್ಥಿತಿಯನ್ನು ಕಂಡು ಚಿಂತೆಯಾಯಿತು. ಏನು ಕೇಳಿದರು ಮೌನ, ಉತ್ತರವಿಲ್ಲ. ಅಂತು ಆ ದಿನವನ್ನು ಕಳೆದರು ಸಂಜೆಯಾಯಿತು. ಬಲವಂತದಿಂದ ಯುವರಾಜನನ್ನು ಮತ್ತು ಅವನ ಇಬ್ಬರು ಪತ್ನಿಯರನ್ನು ಮಣೆಯ ಮೇಲೆ ಕೂಡಿಸಿ ಆರತಿ ಬೆಳಗಿದರು. ಸುಸ್ವರದಿಂದ ಮುತ್ತೈದೆಯರು ಹಾಡಿದರು. ರಾತ್ರಿ ಭೋಜನನಾಂತರ ನಿಷೇಕ ಗೃಹಕ್ಕೆ ಸಂಭ್ರಮದಿಂದ ಕಳಿಸಿದರು. ಆ ಮೇಲೆ ಸ್ವಲ್ಪ ಸಮಯಾ ನಂತರ ಪತ್ನಿಯರನ್ನು ಕಳಿಸಿ ಕವಾಟಗಳನ್ನು ಮುಚ್ಚಿದರು. ಒಳಗೆ ಹೋದ ಹೆಂಗಸರಿಬ್ಬರು ಪರಿಮಳ ದ್ರವ್ಯಗಳಿಂದ ಶೋಭಿಸುತ್ತಿದ್ದ ಮಂಚದ ಮಧ್ಯಭಾಗದಲ್ಲಿ ಯುವರಾಜನಿಗೆ ಬದಲಾಗಿ ಬಹು ದೊಡ್ಡದಾದ ಘಟ ಸರ್ಪ ಒಂದು ತನ್ನ ದೊಡ್ಡದಾದ ಹೆಡೆಯನ್ನು ಬಿಚ್ಚಿ ಬುಸುಗುಟ್ಟುತಿತ್ತು. ಅದನ್ನು ಕಂಡ ಪತ್ನಿಯರಿಬ್ಬರು ಹೆದರಿದರು. ಸ್ವಲ್ಪ ಹೊತ್ತಿನ ಮೇಲೆ ಧೈರ್ಯತಂದು ಕೊಂಡು ನಮಸ್ಕರಿಸಿನಿಂತು ಈ ರೀತಿಯಾಗಿ ಪ್ರಾರ್ಥಿಸಿದರು. ಹೇ ಮಹಾನುಭಾವರಾದ ದೇವಾಂಶರಾದ ಮಹನೀಯರೇ? ನಾವು ನಿಮ್ಮನ್ನು ಸಾಮಾನ್ಯರೆಂದು ಭಾವಿಸಿದ್ದು, ಮಾನವರಂತೆ ವರ್ತಿಸಿದುದಕ್ಕೆ ಕ್ಷಮಿಸಬೇಕು. ನಮ್ಮಿಂದ ದೊಡ್ಡ ಅಪರಾಧವಾಯಿತು, ಕ್ಷಮಿಸಿರಿ, ನಾವು ನಿಮ್ಮಂಥ ಮಹಾನು ಭಾವರ ಪತ್ನಿಯರಾದದ್ದು ಮಾತ್ರ ಬಹು ದೊಡ್ಡ ಪುಣ್ಯ. ಇಂಥ ಸುಯೋಗ ಈ ಜನ್ಮಕ್ಕೆ ಸಿಕ್ಕದ್ದು ನಮ್ಮ ಪೂರ್ವ ಜನ್ಮದ ಸುಕೃತ ಇಷ್ಟೆಸಾಕು, ಇನ್ನುಮುಂದೆ ನಿಮ್ಮ ಮಾರ್ಗಕ್ಕೆ ಅಡ್ಡಿಯಾಗುವವರಲ್ಲ" ಎಂದು ನಮಸ್ಕಾರ ಮಾಡಿ ಇಬ್ಬರು ಬಾಗಿಲುಗಳನ್ನು ತೆರೆದು ಕೊಂಡು

ಹೊರಗೆ ಬಂದರು. ಮನೆಯಲ್ಲಿದ್ದವರೆಲ್ಲಾ ಆಶ್ಚರ್ಯದಿಂದ "ಏನಾಯಿತು, ಏತಕ್ಕಾಗಿ ಹೊರಗೆ ಬಂದಿರಿ" ಎಂದು ಕೇಳಿದರು. ಆಗ ಮನೆಯವರನ್ನು ನಿಷೇಕ ಗೃಹಕ್ಕೆ ಕರೆದು ಕೊಂಡು ಹೋಗಿ ಅಲ್ಲಿಯ ಸ್ಥಿತಿಯನ್ನು ತೋರಿಸಿದರು. ಆ ಹಾವನ್ನು ಕಂಡವರೆಲ್ಲರು ನಮಸ್ಕರಿಸಿ ಪಕ್ಕಕ್ಕೆ ಸರಿದು ನಿಂತರು. ಮಂಚದಿಂದ ಮೆಲ್ಲನೆ ಇಳಿದು ನಾಗನು ಮನೆಯಿಂದ ಹೊರಗೆ ಹೊರಟನು. ಆ ರಾತ್ರಿಯಲ್ಲೆ ನದಿ ತೀರಕ್ಕೆ ಸೇರಿ ನೀರಿಗಿಳಿಯುತ್ತಲೆ ಸರ್ಪ ರಾಜಕುಮಾರನ ನಿಜರೂಪವನ್ನು ತಾಳಿ ನದಿಯಲ್ಲಿ ಸ್ನಾನ ಮಾಡಿ ಆ ಕಡೆ ತೀರಕ್ಕೆ ಆಶ್ರಮ ಸೇರಿದನು. ಅಲ್ಲೆ ಹೊರಗಿನ ಕಟ್ಟೆಯ ಮೇಲೆ ರಾತ್ರಿ ಕಳೆದನು.

ಮರುದಿನ ಬೆಳಿಗ್ಗೆ ಯತಿಪುಂಗವರು ಪರ್ಣಶಾಲೆಯಿಂದ ಹೋರಗೆ ಬಂದು ನೋಡಿದಾಗ ಧೊಂಡೊಪಂತನು ಇನ್ನು ನಿದ್ರೆಯಲ್ಲಿದ್ದನು. ಆ ಮೇಲೆ ಶಿಷ್ಯರು ಬಂದು ನೋಡಿದರು. ಗುರುಗಳು ಅವರನ್ನು "ನಿದ್ರೆ ಭಂಗಮಾಡಬೇಡಿ, ಅವನು ಬಹಳ ದಣಿದಿರುವನು. ಆತನು ಹಾಗೆ ಮಲಗಿರಲಿ. ನೀವು ದೂರಹೋಗಿರಿ" ಎಂದು ನಿವಾರಿಸಿದರು. ಶಿಷ್ಯರೆಲ್ಲ ಗುರುಗಳ ಅಪ್ಪಣೆಯಂತ ತಮ್ಮ ತಮ್ಮ ಪ್ರಾತಃಕರ್ಮಗಳನ್ನು ನೆರವೇರಿಸಿ ಕೊಳ್ಳಲು ದೂರ ಹೋಗಿಬಿಟ್ಟರು. ಬೆಳಗಿನ ಎಳೆ ಸೂರ್ಯಕಿರಣಗಳು ಮುಖದ ಮೇಲೆ ಬೀಳಲು ಪಂತನು ಥಟ್ಟನೆ ಎದ್ದು ನಾಲ್ಕು ಕಡೆ ನೋಡಿದನು. ಪೂರ್ಣ ಬೆಳಗಾಗಿತ್ತು. ಯುವರಾಜನು ಪಕ್ಕದ ನದಿಗೆ ಹೋಗಿ ಸ್ನಾನ ಮುಗಿಸಿದನು. ಶಿಷ್ಯರು ಇನ್ನು ಕೆಲವರು ಅಲ್ಲೆ ಸಂಧ್ಯಾವಂದನೆ ಮಾಡುತ್ತಿದ್ದರು. ಅವರ ಹತ್ತಿರಕ್ಕೆ ಹೋಗಿ ಗೋಪಿ ಚಂದನ ಮುದ್ರೆಗಳನ್ನು ಕೇಳಿ ಪಡೆದು ದ್ವಾದಶ ನಾಮಗಳನ್ನು ಧರಿಸಿ ಶಿಷ್ಯರೊಡನೆ ಗುರುಗಳ ಸನ್ನಿಧಿಗೆ ಬಂದು ಕುಳಿತನು.

ಆ ದಿನ ಹೊಸ ಶಿಷ್ಯ ಬಂದುದಕ್ಕೆ ಗುರುಗಳು ಆತನಿಗೆ ಏನು ಹೇಳುವರೆಂದು ಕುತೂಹಲದಿಂದ ಮೊದಲಿದ್ದ ಎಲ್ಲಾ ಶಿಷ್ಯರು ಕಾದು ಕುಳಿತಿದ್ದರು. ಶ್ರೀ ಅಕ್ಷೋಭ್ಯ ತೀರ್ಥ ಯತಿವರೇಣ್ಯರು ಹೊಸದಾಗಿ ಬಂದ ಧೊಂಡೊಪಂತನನ್ನು ಕುರಿತು. "ಇಂದಿನಿಂದ ನೀನು ಯುವರಾಜನಲ್ಲ. ನಮ್ಮ ಆತ್ಮೀಯ ಶಿಷ್ಯನಾಗಿರುವಿ. ನಿನಗೆ ಪ್ರತ್ಯೇಕವಾದ ಯತಿಗಳಿಗಾಗಿ ಹೇಳುವ ಪದ್ಧತಿ ಪ್ರಕಾರ ವೇದ, ಶಾಸ್ತ್ರ, ಉಪನಿಷತ್ತಿನಲ್ಲಿದ್ದ ಪ್ರತ್ಯೇಕವಾದ ಅಂಶಗಳನ್ನು ಬೋಧಿಸುವೆನು. ಪ್ರಸ್ತುತ ನೀನು ಈ ಗ್ರಂಥವನ್ನು ವೀಕ್ಷಿಸುತ್ತಿರು" ಎಂದು ಒಂದು ವೇದಾಂತ ಪ್ರಮೇಯದ ಗ್ರಂಥವನ್ನು ಯುವರಾಜನಿಗೆ ಕೊಟ್ಟು, ಇತರ ವಿಧ್ಯಾರ್ಥಿಗಳಿಗೆ ಮೊದಲಿನಂತೆ ಆದ ಪಾಠದಿಂದ ಕೆಲವು ಪ್ರಶ್ನೆಗಳನ್ನು ಕೇಳಿ ಸರಿಯಾದ ಸಮಾಧಾನವನ್ನು ಆಲಿಸಿ ಮುಂದಿನ ಪಾಠದ ಪ್ರವಚನ ಮಾಡುತ್ತ ಸಂದರ್ಭಕ್ಕನುಗುಣವಾಗಿ ಪ್ರಮೇಯಗಳ ಉದಾಹರಣೆಯ ನೀಯುತ್ತಾ ಮುಂದುವರಿಸಿದರು.

ಧೊಂಡೊಪಂತನನ್ನು ಹತ್ತಿರದಲ್ಲಿ ಕುಳ್ಳಿರಿಸಿ ಕೊಂಡು ಶಾಸ್ತ್ರ ಮೀಮಾಂಸ, ತರ್ಕ, ವೇದ, ಸಚ್ಛಾಸ್ತ್ರ, ಪುರಾಣ, ಇತಿಹಾಸಾದಿ ಪಾಠ, ವೇದ, ಉಪನಿಷತ್ತುಗಳಾದಿಯಾಗಿ ಅನೇಕಾನೇಕ ಗ್ರಂಥಗಳ ಪಾಠಗಳಾಗುತ್ತಿದ್ದವು. ಬಾಲಕನು ಬಲು ಚುರುಕಾಗಿದ್ದುದರಿಂದ ಏಕ ಸಂಧಿಗ್ರಾಹಿಯಾಗಿ ಮರುದಿನದಲ್ಲೆ ವಿಸ್ತಾರವಾದ ತಾತ್ಪರ್ಯಗಳ ಸಹಿತಪಾಠವನ್ನು ಒಪ್ಪಿಸುತ್ತಿದ್ದರು. ಕೆಲವೇ ವರ್ಷಗಳಲ್ಲಿ

ಮಹಾ ಸಂಸ್ಕೃತ ಶಿರೋಮಣಿಗಳ ಪಂಕ್ತಿಯಲ್ಲಿ ಕುಳಿತನು. ಬಾಲಕನ ಪಾಂಡಿತ್ಯಕ್ಕೆ ಗುರುಗಳು ತಲಿ ತೂಗುತ್ತಿದ್ದರು.

ಶ್ರೀಮದಕ್ಷೋಭ್ಯತೀರ್ಥರು ತಮಗೆ ಪೂರ್ಣ ವಯಸ್ಸಾಯಿತೆಂದು ಯೋಚಿಸಿ ತಮ್ಮ ಮಠದ ಪಂಡಿತರೊಂದಿಗೆ ಮಠದ ಉತ್ತರಾಧಿಕಾರಕ್ಕೆ ಮಂಗಳವೇಡಿ ರಾಜ ರಘುನಾಥಪಂತರ ಸುಪುತ್ರನಾದ ಧೊಂಡೊಪಂತನು ಸಕಲ ವಿಧದ ಪಾಂಡಿತ್ಯ ವೈರಾಗ್ಯಾದಿಗಳಿಂದ ಶೋಭಿಸುತ್ತಿದ್ದವನನ್ನು ತೋರಿಸಿ, ಅವರವರ ಅಭಿಪ್ರಾಯ ಕೇಳಿದರು. ಎಲ್ಲರು ಒಂದೇ ಮನಸ್ಸಿನಿಂದ ತಮ್ಮ ಒಪ್ಪಿಗೆಯಿತ್ತರು. ಮರುದಿನವೇ ಮಠದಲ್ಲಿ ನೂತನ ಶಿಷ್ಯನಿಗೆ ತುರೀಯಾ ಶ್ರಮ ಪ್ರಧಾನವೆಂದು ಸುದ್ದಿಹರಡಿತು. ಆ ಸಮಾರೋಹಕ್ಕೆ ಪಂಡಿತಾಗ್ರಣಿಗಳನೇಕರ ಆಗಮನವಾಯಿತು. ಸಕಾಲದಲ್ಲಿ ಅನೇಕ ವಿದ್ವಾಂಸರ ಸಮಕ್ಷಮದಲ್ಲಿ ಸುದರ್ಶನ ಹೋಮ, ಆತ್ಮಪಿಂಡಾದಿ ಕಾರ್ಯಕ್ರಮಗಳು ಮುಗಿದವು. ಶ್ರೀ ಮಧಕ್ಷೋಭ್ಯ ತೀರ್ಥ ಯತೀಂದ್ರರು ಬಾಲಕನಿಗೆ "ಜಯತೀರ್ಥ" ರೆಂಬ ಆಶ್ರಮದ ನಾಮಕರಣ ಮಾಡಿದರು, ಮೂರು ದಿನ ಬ್ರಾಹ್ಮಣ ಭೋಜನ, ಭೂರಿ ದಕ್ಷಿಣೆಗಳನ್ನಿತ್ತು ಭಕ್ತಾದಿಗಳನ್ನು ಬೀಳ್ಕೊಟ್ಟರು. ಕೆಲವು ದಿನಗಳು ಉಭಯ ಯತಿವರೇಣ್ಯರು ಶಿಷ್ಯಗಣ ಸಮೇತವಾಗಿ ಅಲ್ಲೇ ಇದ್ದರು. ಆ ಮೇಲೆ ಹಿರಿಯ ಗುರುಗಳ ಅಸ್ವಸ್ಥತೆ ಹೆಚ್ಚಾಗಲು ಅಲ್ಲಿಂದ ಮಳಖೇಡಕ್ಕೆ ಬಂದು ಬಿಟ್ಟರು ಸುತ್ತಮುತ್ತ ಇದ್ದ ಶಿಷ್ಯರು, ಭಕ್ತರು ತತ್ಕಾಲಕ್ಕಾಗಿ ಅಲ್ಲಿಯ ಕಾಗಿಣೀ ನದಿ ತೀರದಲ್ಲಿ ಚಿಕ್ಕದೊಂದು ಮಠಕಟ್ಟಿಸಿ ಕೊಟ್ಟರು.

ಪ್ರತಿ ನಿತ್ಯ ಪ್ರಾತಃ ಕಾಲದಲ್ಲಿ ಅಹ್ನಿಕಾದಿಗಳನ್ನು ಮುಗಿಸಿ ಶಿಷ್ಯರಿಗೆ ಪಾಠ ಪ್ರವಚನಾದಿಗಳು ನಡೆಸಿ ಅಪರಾಹ್ನಕ್ಕೆ ಸ್ನಾನ ಗುರುಪರಂಪರಾಗತವಾಗಿ ಬಂದಿದ್ದ ದೇವತಾರ್ಚನೆ ನೈವೇದ್ಯ ವೈಶ್ವದೇವಾದಿ ದೈನಂದಿನ ಕರ್ಮಗಳನ್ನು ಮುಗಿಸಿ ತೀರ್ಥ ಪ್ರಸಾದವನ್ನು ಗುರುಗಳಿಗೆ ಸಮರ್ಪಿಸಿ, ತಾವು ಭುಂಜಿಸುತ್ತಿದ್ದರು. ಆ ಮೇಲೆ ಶಿಷ್ಯ ಸಮೂಹ ತೀರ್ಥ ಪ್ರಸಾದವನ್ನು ಸ್ವೀಕರಿಸುತ್ತಿದ್ದರು. ಈ ರೀತಿಯಾಗಿ ಕೆಲವು ಮಾಸ ಕಳೆದವು. ಒಂದು ಮಾರ್ಗ ಶಿರ ಕೃಷ್ಣ ಪಂಚಮಿಯ ದಿನ ಬೆಳಿಗ್ಗೆ ತಮ್ಮ ಆತ್ಮೀಯ ಶಿಷ್ಯ ಶ್ರೇಷ್ಠರಾದ ಜಯತೀರ್ಥರನ್ನು ಹತ್ತಿರಕ್ಕೆ ಕರೆದು" ನಾವು ಇಂದು ಯಾತ್ರಾ ಮಾಡುವೆವು. ನೀವು ಶೀಘ್ರವಾಗಿ ದೇವರ ಪೂಜೆಮುಗಿಸಿ ತೀರ್ಥವನ್ನು ನಮಗೆ ತಂದು ಕೊಡಿರಿ." ಎಂದು ಹೇಳಿದರು. ಗುರುಗಳ ಆಜ್ಞಾನುಸಾರ ಶೀಘ್ರಸ್ನಾನಾದಿಗಳನ್ನು ಮುಗಿಸಿ ದೇವತಾರ್ಚನೆ ನಡೆಯಿತು. ದೊಡ್ಡಯತಿಗಳಿಗೆ ಶಿಷ್ಯರು ಸ್ನಾನ ಮಾಡಿಸಿ ದ್ವಾದಶ ನಾಮ ಮುದ್ರೆಗಳನ್ನು ಹಚ್ಚಿ ಕೂಡಿಸಿದರು. ಹಿರೇಗುರುವರ್ಯರು ಕೇಶವ ನಾಮಗಳಂದು ಕೊಂಡು ಕುಳಿತಿರಲು, ಚಿಕ್ಕ ಯತಿವರ್ಯರು ದೇವರ ತೀರ್ಥವನ್ನು ತಮ್ಮ ಗುರುಗಳ ಕೈಯಲ್ಲಿ ಹಾಕಲು ಗುರುಗಳು ತೀರ್ಥ ಸ್ವೀಕಾರ ಮಾಡಿದರು. ಸ್ವಲ್ಪ ಹೊತ್ತಿನ ಮೇಲೆ ಚಿಕ್ಕ ಯತಿಗಳು ದೇವರ ಪೆಟ್ಟಿಗೆ ಭುಜಂಗಿಸಿ, ಪುನಃ ಗುರುಗಳಲ್ಲಿಗೆ ಬಂದು ನೋಡಿದಾಗ ಶ್ರೀ 1008 ಶ್ರೀ ಆಕ್ಷೋಭ್ಯತೀರ್ಥರು ಶ್ರೀ ಹರಿ ಪಾದ ಸೇರಿದ್ದರು. ಅಂದು ಮಾರ್ಗಶಿರ ಬಹುಳ ಪಂಚಮಿಯ ದಿನ. ಎಲ್ಲಾ ಶಿಷ್ಯರು, ಪುರಜನರು ಗುಂಪು ಗೂಡಿದರು. ಪಂಡಿತ ವರ್ಗದವರು ಬಂದರು. ಉತ್ತರಕ್ರಿಯೆಗಳು ಪದ್ಧತಿ ಪ್ರಕಾರ ಸಾಂಗೊಪಾಂಗವಾಗಿ ಅಲ್ಲೇ

ಕಾಗಿಣೀ ನದಿ ತೀರದಲ್ಲೇ ನೆರವೇರಿದವು. ಪುನಃ ಜಯತೀರ್ಥರು ಸ್ನಾನಾದಿಕಾರ್ಯ ನೆರವೇರಿಸಿ ದೇವರ ಪೂಜೆಮಾಡಿ, ನೈವೈದ್ಯ ಮುಗಿಸಿ ತೀರ್ಥ ಪ್ರಸಾದ ಸ್ವೀಕರಿಸುವದಕ್ಕೆ ಅಂದು ಸಂಜೆಯಾಯಿತು.

ಶ್ರೀ ಯೋ ವಿದ್ಯಾರಣ್ಯ ವಿಪಿನಂ ತತ್ತ್ವ ಮಸ್ಯಸಿ ಸಾಚ್ಛಿನತ್

ಶ್ರೀಮದಕ್ಷೋಭ್ಯ ತೀರ್ಥಾಯ ನಮಃ ಸ್ತಸ್ಮೈ ಮಹಾತ್ಮನೇ ||

ಜಯತೀರ್ಥ ಯತಿವರೇಣ್ಯರು ಶ್ರೀಮನ್ಮಧ್ವಾಚಾರ್ಯರು ಬರೆದ ಮೂವತ್ತೇಳು (37) ಗ್ರಂಥಗಳನ್ನು ಆಮೂಲಾಗ್ರವಾಗಿ ಆವಲೋಕಿಸಿ, ಕೆಲವು ಪುಸ್ತಕಗಳಿಗೆ ಸಮಗ್ರವಾಗಿ ಟೀಕಾ ತಾತ್ಪರ್ಯವನ್ನು ರಚಿಸಿ, ಭಕ್ತಲೋಕಕ್ಕೆ ಸುಲಭವಾಗಿ ತಿಳಿಯುವಂತೆ ಅನುಗ್ರಹ ಮಾಡಿದರು. ಸುಲಲಿತ ಶೈಲಿಯಲ್ಲಿ ಟೀಕೆಯನ್ನು ರಚಿಸಿದಕಾರಣ ಅವರಿಗೆ ಟೀಕಾಚಾರ್ಯರು, "ಟೀಕಾರಾಯ"ರೆಂಬ ಸಾರ್ಥಕವಾದ ಹೆಸರು ಬಂದಿತು. ಭಾರತದೇಶವನ್ನು ಶಿಷ್ಯ ಸಮೇತರಾಗಿ ಸಂಚರಿಸಿ ಮಾಯಾವಾದಿಗಳನ್ನು ಜಯಸಿದರು. ಭಾರತದ ನಾಲ್ಕು ದಿಕ್ಕುಗಳಲ್ಲಿಯು ಇವರ ಹೆಸರು ಪ್ರಸಿದ್ಧಿಯಾಯಿತು. ಆನಂದತೀರ್ಥರು ರಚಿಸಿದ ಗ್ರಂಥಗಳಿಗೆ ಟೀಕೆಯನ್ನು ರಚಿಸಿದ ಸ್ಥಳ ಗಜಗಹ್ವರ ಎಂದು ಹೇಳುತ್ತಾರೆ. ಸುಧಾ ಗ್ರಂಥವನ್ನು ರಚಿಸಿ ಪಂಡಿತ ಲೋಕಕ್ಕೆ ಅನೇಕ ಗ್ರಂಥಗಳನ್ನು ರಚಿಸಿರುವರು. ಇಂಥ ಮಹಾನುಭಾವರು "ಟೀಕಾರಾಯರು". ಇವರು ಇನ್ನೂ ಅನೇಕ ಗ್ರಂಥಗಳನ್ನು ರಚಿಸಿರುವವರು. ಸದಾ ದ್ವೈತ ಸಿದ್ಧಾಂತ ಬಗ್ಗೆ ಶಿಷ್ಯರಿಗೆ ಹೇಳುವದು, ಲೋಕ ಕಲ್ಯಾಣಕ್ಕಾಗಿ ಶ್ರೀ ಬ್ರಹ್ಮಕರಾರ್ಚಿತ ಶ್ರೀರಾಮದೇವರ ಪೂಜೆ, ಪ್ರಾರ್ಥನೆ ಮಾಡುತ್ತಿದ್ದರು. ಅನೇಕ ಮಹಿಮೆಗಳನ್ನು ಭಕ್ತರಿಗೆ ತೋರಿಸಿದ್ದಾರೆ.

ಒಂದಾನೊಂದು ಆಷಾಢ ಬಹುಳ ಪಂಚಮಿಯ ದಿನ ತಮ್ಮ ಗುರುಗಳಾದ ಶ್ರೀ ಶ್ರೀ ಅಕ್ಷೋಭ್ಯ ತೀರ್ಥ ಶ್ರೀಪಾದಂಗಳ ಸನ್ನಿಧಾನದಲ್ಲಿ ಶ್ರೀಹರಿಪುರವನ್ನು ಸೇರಿದರು. ಶ್ರೀ ಟೀಕಾಚಾರ್ಯರ ವೃಂದಾವನ ಮಳಖೇಡದಲ್ಲಿದೆ. ಪ್ರತಿವರ್ಷವು ಆಷಾಢ ಬಹುಳ ಪಂಚಮಿಯ ದಿನ ಅತಿ ವಿಜೃಂಭಣೆಯಿಂದ ಮೂರುದಿನ ಆರಾಧನೆ ನಡೆಯುತ್ತದೆ.

|| ಓಂ ಶಾಂತಿಃ ಶಾಂತಿಃ ಶಾಂತಿಃ ||

ಪಾಂಡವರಲ್ಲಿ ಮಧ್ಯಮರಾದ ಅರ್ಜುನನೆ ಮಧ್ವಚಾರ್ಯರಗೆ ಪ್ರೀತಿ ಪಾತ್ರವಾದ ಎತ್ತಾಗಿ, ಅವರು ಬೋಧಿಸಿದ ಜ್ಞಾನ ಪಾಠದಿಂದ, ಮತ್ತು ಅವರು ರಚಿಸಿದ (37) ಮೂವತ್ತೇಳು ಗ್ರಂಥಗಳನ್ನು ಹೊತ್ತು ಸುತ್ತಾಡಿದ ಮಹಾನುಭಾವರೇ ಧೊಂಡೊಪಂತರಾಜರಾಗಿ ಶ್ರೀ ಅಕ್ಷೊಭ್ಯತೀರ್ಥರ ಅನುಗ್ರಹಕ್ಕೆ ಪಾತ್ರರಾದ ಮಹನೀಯರೆ ಶ್ರೀಜಯತೀರ್ಥ ಯತಿ ಸಾರ್ವಭೌಮರು, ಇವರೆ ಶ್ರೀ ಟೀಕಾಚಾರ್ಯರೆಂಬ ಸಾರ್ಥಕ ನಾಮದಿಂದ ಮೆರೆದು ಮುಂದೆ ಧೂರೂರು ಗ್ರಾಮಾಧಿಕಾರಿಗಳಾಗಿ ಜನಿಸಿದ ಮಹಾತ್ಮರೆ ಶ್ರೀ ಶೇಷದಾಸವರೇಣ್ಯರು.

|| ಓಂ ಶಾಂತಿಃ ಶಾಂತಿಃ ಶಾಂತಿಃ ||

4ನೇ ಭಾಗ





# ಮೊದಲಕಲ್ಲು (ಆದಿಶಿಲಾ ಕ್ಷೇತ್ರ)

# ಶ್ರೀ ಶೇಷ ದಾಸವರೇಣ್ಯರು

|| ಶ್ರೀಪಾರ್ಥಸಾರಥ್ಯೈನಮಃ ||

## ಮೊದಲಕಲ್ಲು (ಆದಿಶಿಲಾ ಕ್ಷೇತ್ರ)

# ಶ್ರೀ ಶೇಷದಾಸವರೇಣ್ಯರು

ಹೈದರಬಾದು ಸಂಸ್ಥಾನಕ್ಕೆ ಸೇರಿದ (ಈಗಿನ ಆಂಧ್ರಪ್ರದೇಶ) ಮಹಾಬೂಬು ನಗರ ಜಿಲ್ಲೆಯ ಗದ್ವಾಲ ಸಂಸ್ಥಾನದ ಆ ಆಧೀನದಲ್ಲಿತ್ತು. ಗದ್ವಾಲಿಗೆ ಎಂಟು ಮೈಲು ಪಶ್ಚಿಮಕ್ಕೆ ಧರೂರು ಗ್ರಾಮವಿದೆ. ಆ ಗ್ರಾಮದ ಶ್ಯಾನುಭೋಗರಾದ ಶ್ರೀ ತಿಮ್ಮಣ್ಣಯ್ಯನವರು ಮಧ್ವ ಮತದ ಶೋತ್ರಿಯ ಬ್ರಾಹ್ಮಣರು. ಆಚಾರ ವಿಚಾರದವರು. ಭಾರದ್ವಾಜ ಗೋತ್ರಜರು ಶ್ರೀಮದುತ್ತರಾದಿ ಮಠದ ಶಿಷ್ಯರು ಆಗಿದ್ದರು. ಇವರು ಯಜುಃ ಶಾಖದವರು.

ತಮ್ಮ ಗ್ರಾಮದ ಪ್ರಜೆಗಳನ್ನು ಒಂದೇ ಕುಟುಂಬದವರಂತೆ ನೋಡಿಕೊಳ್ಳುತ್ತಿದ್ದರು. ಗ್ರಾಮಧಿಕಾರವನ್ನು ನಿರ್ವಹಿಸುತ್ತಿದ್ದರು. ತಿಮ್ಮಣ್ಣಯ್ಯನವರಿಗೆ ಮೂರು ಜನ ಗಂಡು ಮಕ್ಕಳು, ಇಬ್ಬರು ಹೆಣ್ಣು ಮಕ್ಕಳು. ಹೆಣ್ಣು ಮಕ್ಕಳಿದ್ದಂತೆ ಜನ ವಾಡಿಕೆ, ಸರಿಯಾದ ವಿವರ ಸಿಕ್ಕಿಲ್ಲ. ಹಿರಿಯ ಮಗನ ಹೆಸರು ಶೇಷಪ್ಪ, ಎರಡನೆಯವರು ವೆಂಕಣ್ಣ, ಮೂರನೇ ಸಂತಾನ ಶೀನಪ್ಪ ಎಂದು. ಹಿರಿಯ ಮಗನಾದ ಶೇಷಪ್ಪನ ಜನನ ಶಾಲಿವಾಹನ ಶಕ 1739 ಈಶ್ವರ ನಾಮಸಂವತ್ಸರ ಕಾರ್ತಿಕ ಶುದ್ಧ ದ್ವಾದಶಿ. ಅಂದರೆ ಕ್ರಿ.ಶ. 1817 ಇಸ್ವಿ. ಇವರನ್ನು ಶೇಷಪ್ಪನೆಂದೇ ಎಲ್ಲರು ಕರೆಯುವದು ವಾಡಿಕೆಯಾಗಿತ್ತು.

ಶೇಷಪ್ಪನವರು ವಿದ್ಯಾಭ್ಯಾಸ ಮಾಡಿ ಪ್ರಬುದ್ಧರಾದ ಮೇಲೆ ಶೇಷಗಿರಿರಾಯರೆಂದು ಹೆಸರು ವಾಸಿಯಾಯಿತು. ರಾಯರಿಗೆ ಇಬ್ಬರು ಪತ್ನಿಯರು, ಸುಬ್ಬಮ್ಮ ವೆಂಕಮ್ಮ, ಶೇಷಗಿರಿರಾಯರಿಗೆ ಮೂರು ಜನ ಮಕ್ಕಳು. ಕೆಲವೇ ದಿನಗಳಲ್ಲಿ ಹೆಸರಾಂತ ಕುಲಕರಿಣಿಗಳಾಗಿ ಪ್ರಸಿದ್ಧರಾದರು ತಮ್ಮ ತಂದೆಯರಂತೆ, ಸುಖಸಂತೋಷಗಳಿಂದ ಇವರ ಮನೆಯಲ್ಲಿ ಬಂಧು ಬಳಗಗಳಿಂದ ರಾಜರಂತೆ ಮೆರೆಯುತ್ತಿದ್ದರು. ಇವರದು ವಿಶಾಲವಾದ ದೊಡ್ಡಮನೆ. ಈಗ ಗೋಡೆಗಳು ಮಾತ್ರ ಉಳಿದಿವೆ. ಹೀಗಿರಲು ಸಹನೆ ಇಲ್ಲದ ಕೆಲವು ದುಷ್ಟರು ಗದ್ವಾಲಿ ಸಂಸ್ಥಾನದ ರಾಜರಿಗೆ "ಶೇಷಗಿರಿ ರಾಯರು ಪ್ರಜೆಗಳಿಂದ ವಸೂಲು ಮಾಡಿದ ಪ್ರಭುತ್ವದ ಹಣವನ್ನು ತಮ್ಮ ಸ್ವಂತ ಖರ್ಚಿಗಾಗಿ ವ್ಯಯಮಾಡಿದರೆಂದು ಪಿತೂರಿ ಹೇಳಲು, ರಾಜ ಸೋಮಭೂಪಾಲನು ಕ್ರೋಧನಾಗಿ ಪೂರ್ವಪರಗಳ

ಆಲೋಚನೆ ಮಾಡದೆ ಧರೂರು ಶಾನುಭೋಗರನ್ನು ತಮ್ಮ ಆಸ್ಥಾನಕ್ಕೆ ಕರೆತರಲು ದೂತರಿಗೆ ಆಜ್ಞಾಪಿಸಿದನು. ರಾಜಾಜ್ಞೆಯನ್ನು ಶಿರಸಾವಹಿಸಿ ಏನನ್ನೂ ತಿಳಿಯದ ಶೇಷಗಿರಿ ರಾಯರು ರಾಜರ ಸಮ್ಮುಖಕ್ಕೆ ಹೋದರು. ಎದುರಿನಲ್ಲಿ ಆಸನದಲ್ಲಿ ಕುಳಿತಿದ್ದ ರಾಜನಿಗೆ ನಮಸ್ಕಾರ ಮಾಡಿ ಒಂದು ಪಕ್ಕಕ್ಕೆ ನಿಂತು ಕೊಂಡರು.

ಶಾನುಭೋಗರನ್ನು ಕಂಡು ಕೋಪಾವೇಶದಿಂದ "ನೀವೇನಾ ಶೇಷಪ್ಪ?" ಎಂದು ಗರ್ಜಿಸುತ್ತ ಅವರನ್ನು ಮೇಲಿಂದ ಕೆಳಕ್ಕೆ ನೋಡಿ, ಅವರ ಜರಿಯ ಧೋತ್ರ, ಜರಿ ರೂಮಾಲು, ಬೆರಳ ಉಂಗರಗಳನ್ನು ಕಂಡು "ಇಷ್ಟೆಲ್ಲ ಅಲಂಕಾರಗಳು ನಿಮಗೆ ಎಲ್ಲಿಂದ ಬಂದವು? ಪ್ರಜೆಗಳು ಕೊಟ್ಟ ಹಣವನ್ನು ನಿಮ್ಮಿಷ್ಟದಂತೆ ವ್ಯಯಮಾಡಿ ಆಭರಣಗಳಿಂದ ಮೆರೆಯುವದಕ್ಕೇನು? ಎಂದು ಬೇರೆ ಕೆಲವು ದುರ್ಭಾಷಗಳಾಡಿ ಅವಹೇಳನೆ ಮಾಡುತ್ತ ತನ್ನ ಕೈಯಲ್ಲಿದ್ದ ಹಿಡಿ ಕಟ್ಟಿಗೆಯಿಂದ ಕರಣಿ ಕರ ಶಿರದತ್ತ ರಭಸದಿಂದ ಬೀಸಲು ಆ ಕೋಲು ಶೇಷಪ್ಪನವರ ರುಮಾಲನ್ನು ಕೆಳಗೆ ಬೀಳುವಂತೆ ತಾಕಿತು. ಈ ಅವಮಾನವನ್ನು ಸಹಿಸಲಾರದ ಶೇಷಪ್ಪನವರು ಕ್ರೋಧದಿಂದ ಈ ವರ್ಷ ಮಳೆ ಇಲ್ಲದೆ ಬೆಳೆಯಲಿಲ್ಲ ವಾದ ಕಾರಣ ರೈತಾಹಪ್ತಿಯೇ ಕಟ್ಟಿಲ್ಲ. ವಿನಃ ಕಾರಣ ನಾನೆ ಹಪ್ತಿ ಹಣ ಬಳಿಸಿದೆನೆಂದು ಇಲ್ಲದ ಮಾತನ್ನಾಡುತ್ತಿರುವಿರಿ. ಸಾಕು ನಿಮ್ಮ ಉದ್ಯೋಗ, ನನ್ನ ತಲಿಯ ಮೇಲಿನ ರೂಮಾಲು ಬೀಳುವುದು. ತಲೆ ಬೀಳುವುದು ಎರಡು ಸಮಾನ ಎಂದು ತಮ್ಮ ಕೈಯಲ್ಲಿದ್ದ ತಮ್ಮ ಗ್ರಾಮದ ಲೆಕ್ಕ ಪತ್ರಗಳನ್ನು ರಾಜನ ಮುಂದೆ ಎಸೆದು, ರಾಜ ಭವನದಿಂದ ಹೊರಗೆ ಬಂದರು. ಈ ರೀತಿ ಶೇಷಪ್ಪನವರಿಗೆ ರಾಜನು ಅವಮಾನ ಮಾಡಿದ್ದು, ಶಾಲಿವಾಹನಶಕೆ 1775 ಪ್ರಮಾಥಿ ನಾಮಸಂಖ್ಯೆ ಸರಿಯಾಗಿ 1853 ಇಸ್ವಿ. ಆಗ ಶಾನು ಭೋಗರ ವಯಸ್ಸು 35 ವರ್ಷಗಳು. ಕೆಲವು ದಿನಗಳಾದ ನಂತರ ರಾಜನನ್ನು ಅವನ ನೌಕರನು ಕೊಂದು ಬಿಟ್ಟನು.

ಶಾನಭೋಗರು ತಿರುಗಿ ತಮ್ಮ ಗ್ರಾಮಕ್ಕೆ ಹೋಗದೆ ಅರಣ್ಯ ಮಾರ್ಗವಾಗಿ ನಡೆದರು. ಅವರ ಹೃದಯದಲ್ಲಿ ಮಿಂಚೊಂದು ಮಿಂಚಿದಂತಾಗಿ ಮುನ್ನಡೆದರು. ಏಕಾಂಗಿಯಾಗಿ ಏಕಾಂತ ಬಯಸಿ ನಡೆದರು. ಉಪ್ಪರಿಗೆ ಮನೆ ಬಿಟ್ಟು, ಬಂಧು ಬಳಗವನ್ನು ಬಿಟ್ಟು ಆರ್ತ ಜನರ ಪ್ರಭಂಜನಕ್ಕೆ ಜಗ್ಗದೆ ಭರದಿಂದ ಹೊರಟರು. ಕೃಷ್ಣಾತೀರವನ್ನು ಹಿಡಿದು ನಡೆದು ಹೋಗುತ್ತಿರುವಂತೆ ಕತ್ತಲೆಯಾಯಿತು. ಆ ಪ್ರಾಂತದಲ್ಲಿ ಒಂದು ಊರು ಸಹ ಹತ್ತಿರದಲ್ಲಿರಲಿಲ್ಲ. ಹುಣಸೇ ಮರಗಳಿಂದ ಕೂಡಿದ ಅರಣ್ಯ. ಅಲ್ಲೇ ಒಂದು ಸ್ಥಳದಲ್ಲಿ ನೆಲದ ಮೇಲೆ ಮಲಗಿದರು. ಅದೇ ಚಿಂತರವೇಲಿ ಪ್ರಾಣದೇವರಸ್ಥಾನ. ಮಹಾಮಹಿಮರು. ದಾಸರು, ಸಂತರು, ಶರಣರು, ಮಹಾನುಭಾವರು. ಇಂಥಹ ಒಂದು ತಿರುವುನಿಂದ ತಮ್ಮ ಆಚಾರ ವಿಚಾರಗಳನ್ನು ಮಾರ್ಪಡಿಸಿ ಕೊಂಡು ಅಲೌಕಿಕದಲ್ಲಿದ್ದು ಪರಮಾರ್ಥಿಕ ಸಂಪತ್ತನ್ನು ಪಡೆದು ಕೊಳ್ಳುತ್ತಾರೆ.

ಹಗಲೆಲ್ಲಾ ನಡೆದ ಕಾರಣ ಬಹಳ ದಣಿದಿದ್ದ ಕಾರಣ ಯಾವ ಸುಖವನ್ನು ಬಯಸದೆ ನಿದ್ರಾ ದೇವಿ ಬೇಗನೆ ಆವರಿಸಿದಳು. ಗಾಢವಾದ ನಿದ್ರೆ ಹತ್ತಿತ್ತು. ನಾಲ್ಕನೇ ಯಾಮದಲ್ಲಿ ಶೇಷಪ್ಪನವರಿಗೆ ಒಂದು ಸ್ವಪ್ನವಾಯಿತು. ಆ ಸ್ವಪ್ನದಲ್ಲಿ ಮಾರುತಿರಾಯನು ಕಾಣಿಸಿ "ನಿನಗೆ

ಜಯವಾಗಲಿ" ಎಂದು ಆಶೀರ್ವದಿಸಿದರು. ಸ್ವಲ್ಪ ಹೊತ್ತಿನ ಮೇಲೆ ಎಚ್ಚರವಾಯಿತು. ಬೆಳಗಿನ ಝಾವದಲ್ಲಿ ಕತ್ತಲೆ ಇದ್ದ ಪ್ರಯುಕ್ತ ಸುತ್ತ ಮುತ್ತ ನೋಡಲು ಏನೂ ಕಾಣಲಿಲ್ಲ. ಸ್ವಲ್ಪ ಹೊತ್ತಾದ ನಂತರ ಕತ್ತಲೆ ಕಳೆದು ಬೆಳಕಾಗುತ್ತಿತ್ತು. ತಾವು ಕುಳಿತಿದ್ದ ಎದುರಿನಲ್ಲೆ ಒಂದು ದೊಡ್ಡ ಹುತ್ತು ಕಾಣಿಸಿತು. ರಾಯರು ಹುತ್ತಿನ ಹತ್ತಿರಕ್ಕೆ ಹೋಗಿ ನೋಡಲು ಮಾರುತಿರಾಯನ ಶಿಲೆಯು ಆ ಹುತ್ತಿನಲ್ಲಿ ಹೂತುಹೋಗಿತ್ತು. ರಾಯರು ಮಾರುತಿಗೆ ಮನದಲ್ಲೆ ನಮಸ್ಕರಿಸಿ ಮುಂದೆ ಸ್ನಾನಕ್ಕಾಗಿ ನಡೆದರು. ಸ್ವಲ್ಪ ದೂರದಿಂದಲೇ ಕೃಷ್ಣ ನದಿಯ ನೀರಿನ ಹರಿತದ ಶಬ್ಧ ಕೇಳಿಸಲು ನೆಟ್ಟಗೆ ನದಿಗೆ ಹೋಗಿ, ನದಿಯಲ್ಲಿ ಮಿಂದು ತಮ್ಮ ದಿನನಿತ್ಯದ ಅಹ್ನೀಕವನ್ನು ಪ್ರಾರಂಭಿಸಿದರು. ಕ್ರಮವಾಗಿ ಸಂಧ್ಯಾವಂದನೆ, ವಿಷ್ಣು ಸಹಸ್ರನಾಮ, ವಾಯುಸ್ತುತಿಯನ್ನು ಉಚ್ಚರಿಸುತ್ತಿರಲು ರಾಯರಿಗೆ ಪುನಃ ಬೆಳಿಗ್ಗೆ ತಾವು ಹುತ್ತಿನಲ್ಲಿ ಕಂಡ ವಾಯುದೇವರ ನೆನಪಾಯಿತು. ನದಿ ನೀರು ಒಯ್ಯಲು ಒಂದು ಪಾತ್ರೆ ಸಹ ಅವರಲ್ಲಿರಲಿಲ್ಲ. ಮನದಲ್ಲೆ ಬಹಳ ವ್ಯಥಪಟ್ಟರು. ಆದರೆ ಉಪಾಯವಿಲ್ಲ. ತಮ್ಮ ಅಹ್ನೀಕವನ್ನು ಮುಗಿಸಿಕೊಂಡು ತಿರಿಗಿ ಮಾರುತಿರಾಯನ ಸನ್ನಿಧಿಗೆ ಹೋಗಲು, ಪ್ರಯಾಣವಾಗುತ್ತಿರಲು, ಒಬ್ಬ ವ್ಯಕ್ತಿ ಬಂದು ನಿಂತಿದ್ದನು. ಅಷ್ಟಕ್ಕೆ ಪೂರ್ವದ ರಾತ್ರಿಯಲ್ಲಿ ಹತ್ತಿರದಲ್ಲಿರುವ ರೇವನಹಳ್ಳಿ ಶಾನುಬೋಗನಿಗೆ ಒಂದು ಸ್ವಪ್ನವಾಗಿತ್ತು. ಮಾರುತಿರಾಯನು ಸ್ವಪ್ನದಲ್ಲಿ ಕಂಡು. "ತಿಮ್ಮಪ್ಪಾ ನಾಳೆ ಬೆಳಿಗ್ಗೆ ನನ್ನ ಸೇವೆಗಾಗಿ ಒಬ್ಬ ಬ್ರಾಹ್ಮಣನು ಬರುವನು, ಆತನು ಮಹಾನಿಷ್ಠಾವಂತನು. ಯೋಗ್ಯನಾದ ವಿಪ್ರನು. ಆತನಿಗಾಗಿ ನಿನ್ನ ಮನಿಯಲ್ಲಿದ್ದ ಪದಾರ್ಥವೇ ಬೇಯಿಸಿ ಕೊಂಡು ಹೋಗಿ ಅವರಿಗೆ ಊಟಮಾಡಿಸು ಎಂದು ಹೇಳಿದ ಕಾರಣ ತಿಮ್ಮಪ್ಪನು ಮಡಿಯಿಂದ ಅಡಿಗೆ ಮಾಡಿ ಕೊಂಡು ಶಾನುಭೋಗರ ದರ್ಶನಕ್ಕೆ ಬಂದು ನಿಂತಿದ್ದನು. ರಾಯರು ತಿರುಗಿ ನೋಡಲು ಊಟತಂದ ಬ್ರಾಹ್ಮಣನು ನಿಂತಿದ್ದನು.

ರಾಯರು : "ಯಾರಪ್ಪಾ! ನೀನು ಏನು ತಂದಿರುವೆ"?

ತಿಮ್ಮಪ್ಪ : "ರಾತ್ರಿ ನನ್ನ ಸ್ವಪ್ನದಲ್ಲಿ ಮಾರುತಿರಾಯನು ಬಂದು ತನ್ನ ಸೇವೆಗೆ ಒಬ್ಬ ಬ್ರಾಹ್ಮಣನು ಬಂದಿರುವನು. ಆತನು ನಿಷ್ಠಾಪರನು, ಆತನಿಗೆ ಊಟ ತೆಗೆದುಕೊಂಡು ಹೋಗೆಂದು ಅಪ್ಪಣೆ ಮಾಡಿದರು. ನಾನು ಇಲ್ಲಿಯೆ ಹತ್ತಿರದಲ್ಲಿರುವ ರೇವನಹಳ್ಳಿಯ ಕುಲಕರಣಿ" ಎಂದು ವಿಜ್ಞಾಪಿಸಿ ಕೊಂಡನು.

ರಾಯರು : "ಆಗಲಪ್ಪಾ! ಸಕಾಲಕ್ಕೆ ಊಟತಂದಿರುವೆ ವಿಪ್ರರು ನೀವು. ಅದಲ್ಲದೆ ಮಾರುತಿರಾಯನ ಅಪ್ಪಣೆಯಿಂದ ಮೇಲೆ ಅನುಮಾನವೇ ಇಲ್ಲ. ಎಲ್ಲಾ ದೇವರ ಇಚ್ಛೆ. ನಿನ್ನೆನಿಂದ ನೀರು ಸಹ ಕುಡಿದಿಲ್ಲ. ದೇವರು ನಿಮ್ಮನ್ನು ಕಾಪಾಡಲಿ, ಎಂದ್ಲು ಹರಸಿದರು.

ತಿಮ್ಮಪ್ಪ : "ಎಲ್ಲಾ ಆತನ ಲೀಲೆ, ದೈವ ಚಿತ್ತಕ್ಕೆ ಬಂದದ್ದು ಆಗುತ್ತದೆ. ಇನ್ನು ಮೇಲೆ ನೀವು ಊಟಕ್ಕೆ ಯೋಚಿಸುವದು ಕಾರಣವಿಲ್ಲ. ಪ್ರತಿದಿನ ನಾನೇ ಸ್ವತಃ ಮಾಡಿಕೊಂಡು ತರುವೆನು, ತಮ್ಮ ಸೇವಾ ಕಾರ್ಯಕ್ರಮ ಪದ್ಧತಿಯಂತೆ ನಡೆಸಿರಿ ಮಾರುತಿರಾಯನ ಅಜ್ಞಾನುಸಾರ ಭೋಜನ ಬರುತ್ತದೆ.ಇದು ಒಂದು ವಿಧದ ದೇವರ ಸೇವೆ ಎಂದು ಭಾವಿಸುತ್ತೇನೆ. ದಯವಿಟ್ಟು ಬೇಡವೆಂದು ನಿರಾಕರಿಸಬೇಡಿ" ಎಂದು ಪ್ರಾರ್ಥಿಸಲು, ರಾಯರು ಒಪ್ಪಿಕೊಂಡರು. ಆ ಮೇಲೆ ರಾಯರು ದೇವರನ್ನು ಸ್ಮರಿಸುತ್ತ ಭಗವಂತನಿಗೆ ಶಾನುಭೋಗತಂದ ಭೋಜನ ಪದಾರ್ಥವನ್ನರ್ಪಿಸಿ ಊಟ ಮಾಡಿದರು. ಮಿಕ್ಕದ್ದು ದೇವರ ಪ್ರಸಾದವೆಂದು ತಿಮ್ಮಪ್ಪ ಭುಂಜಿಸಿದನು. ಆ ಮೇಲೆ ಇಬ್ಬರು ಮಾರುತಿರಾಯನಿರುವ ಹುತ್ತಿನ ಹತ್ತಿರಕ್ಕೆ ಬಂದರು. ರಾಯರು ತಿಮ್ಮಪ್ಪನಿಗೆ ಹುತ್ತಿನಲ್ಲಿದ್ದ ಪ್ರಾಣ ದೇವರನ್ನು ತೋರಿಸಿ ತಾವು ಇನ್ನು ಮುಂದೆ ಇಲ್ಲೇ ಇರುವುದಾಗಿ ತಿಳಿಸಿದರು. ತಿಮ್ಮಪ್ಪನು ರಾಯರ ನಿವಾಸಕ್ಕಾಗಿ ಎರಡು ದಿನಗಳಲ್ಲಿ ಒಂದು ಪರ್ಣ ಕುಟೀರವನ್ನು ನಿರ್ಮಿಸಿ ಕೊಟ್ಟರು. ರಾಯರು ರಾತ್ರಿ ವೇಳೆಯಲ್ಲಿ ವಾಯು ದೇವರ ಸ್ಮರಣೆ ಮಾಡುತ್ತ ಆ ಕುಟಿರದಲ್ಲೆ ರಾತ್ರಿಯನ್ನು ಕಳೆಯುತ್ತಿದ್ದರು.

ಹುತ್ತಿನಲ್ಲಿರುವ ಮಾರುತಿಯ ಶಿಲೆಯ ದರ್ಶನ ಪೂರ್ತಿಯಾಗದ ಕಾರಣ, ದಾಸರೆ ಪ್ರತಿದಿನ ಸ್ವಲ್ಪ ಸ್ವಲ್ಪ ಮಣ್ಣನ್ನು ಕ್ರಮವಾಗಿ ಕೆಲವು ದಿನದಲ್ಲೆ ಪೂರ್ಣ ಹುತ್ತನ್ನು ತೆಗೆದು ಬಯಲು ಮಾಡಿ ಮಾರುತಿರಾಯನ ದರ್ಶನ ಪೂರ್ಣವಾಗುವಂತೆ ಮಾಡಿ ಬಿಟ್ಟರು. ಇನ್ನೊಬ್ಬರ ಸಹಾಯವಿಲ್ಲದೆ ತಾವೇ ಸ್ವಯಂ ಪೂರ್ಣವಾಗಿ ಶ್ರಮಿಸಿದರು. ಅಲ್ಲಿಂದ ಮಾರುತಿ ರಾಯನ ಸೇವೆ ಹೆಚ್ಚಿನ ರೀತಿ ನಡೆಯಲಾರಂಭವಾಯಿತು. ಈಗ ಆಲಯದ ಹಿಂದಿರುವ ಭಾವಿಯಲ್ಲಿ ಮಿಂದು ಇಳೀ ವದ್ದಿಯಿಂದ ಬಂದು ವಾಯು ದೇವರ ಮುಂದೆನಿಂತು ಅಖಂಡವಾಗಿ ಜಪ ಮಾಡಬೇಕು. ಉಟ್ಟ ವಸ್ತ್ರ ಸ್ವಲ್ಪ ಗಾಳಿಗೆ ಆರಿದರೆ ಪುನಃ ಬಾವಿಯಲ್ಲಿ ಮುಳುಗಿ ಬಂದು ನಿಲ್ಲುತ್ತಿದ್ದರು. ದ್ವಾಪರದಲ್ಲಿ ಅರ್ಜುನನು ಪಾಶುಪತಾಸ್ತ್ರವನ್ನು ಪಡೆಯಲು ಶಿವನನ್ನು ಕುರಿತು ಮಾಡಿದ ತಪಸ್ಸನ್ನು ನೆನಪಿಗೆ ತರುತ್ತಿದೆ.

ಈ ರೀತಿಯಾಗಿ ಘೋರವಾದ ತಪವನ್ನು ಮಾಡಹತ್ತಿದರು. ದಾಸರ ತಪಸ್ಸಿಗೆ ಮೆಚ್ಚಿದ ಪವನರಾಯನು, ಅಂದು ರಾತ್ರಿ ಸ್ವಪ್ನದಲ್ಲಿ ಕಂಡು ಶ್ರೀ ವಿಜಯ ದಾಸರನ್ನು ಸೇವಿಸಲು, ತಿಳಿಸಿದಂತಾಯಿತು. ಮರುದಿನವೇ ಶೇಷಪ್ಪನವರು ಮಾನ್ವಿ ತಾಲುಕಿಗೆ ದಕ್ಷಿಣ ದಿಶದಲ್ಲಿ ಎಂಟು ಮೈಲು ದೂರದಲ್ಲಿರುವ ಚೀಕಲಪರ್ವಿಯೆಂಬ ಗ್ರಾಮಕ್ಕೆ ತೆರಳಿದರು.

ಶ್ರೀಪಾದರಾಯರ ಪ್ರತಿಷ್ಠಾಪಿತ ಶ್ರೀ ನರಸಿಂಹದೇವರು ಮತ್ತು ಅವರು ಹಾಕಿರುವ ಅಶ್ವತ್ಥ ವೃಕ್ಷವಿರುವ ಮಹಾ ಕ್ಷೇತ್ರವದು. ಚೀಕಲಪರ್ವಿ ಶ್ರೀ ವಿಜಯರಾಯರ ಜನ್ಮ ಸ್ಥಳವಾಗಿತ್ತು.

ಶ್ರೀ ವಿಜಯರಾಯರು ತಿರುಗಾಡಿದ ಭೂಮಿಯಲ್ಲಿ ಸಂಚಾರ ಮಾಡಿ, ದಾಸರು ಆಹ್ನಿಕ ಮಾಡಿ ಅಶ್ವತ್ಥಗತ ನರಸಿಂಹದೇವರ ಕಟ್ಟೆಗೆ ನಮಸ್ಕಾರ ಮಾಡಿದರು. ಮತ್ತು ದಾಸರ ಮನೆಯಲ್ಲಿದ್ದ ಸಾಣೆಕಲ್ಲು ಮುಟ್ಟಿ ನಮಸ್ಕರಿಸಿ, ದೇವರ ಪೆಟ್ಟಿಗೆಗೆ ಸಾಷ್ಟಾಂಗವೆರಗಿ, ಅಲ್ಲಿ ಸೇವೆ ಮಾಡಿ ಪುನಃ ಚಿಪ್ಪಗಿರಿ ಕ್ಷೇತ್ರಕ್ಕೆ ಪ್ರಯಾಣ ಬೆಳೆಸಿದರು. ಶ್ರೀ ವಿಜಯರಾಯರ ತಮ್ಮ ಪ್ರೀತಿಯ ಪುತ್ರ ಸಮಾನರಾದ ಮೋಹನ ದಾಸರಿದ್ದ ಸ್ಥಳ ಚಿಪ್ಪಗಿರಿ. ಶ್ರೀ ವಿಜಯರಾಯ ಗೋಪಾಲ ಕ್ರಿಷ್ಣನನ್ನು ಪ್ರತಿಷ್ಟೆ ಮಾಡಿ, ದೇವರ ಸೇವೆಮಾಡಿ, ಚಿಪ್ಪಗಿರಿಯಲ್ಲೆ ತಮ್ಮ ಪಾರ್ಥಿವ ದೇಹವನ್ನು ತ್ಯಜಿಸಿದ ಕ್ಷೇತ್ರವಾಗಿದೆ.

ಶ್ರೀ ಶೇಷಪ್ಪನವರು ಕೆಲವು ದಿನ ಅಲ್ಲಿ ಕಠಿಣವಾದ ತಪ್ಪಸ್ಸು ಮಾಡಿ ಸೇವೆ ಮಾಡಿದರು. ಒಂದು ದಿನ ರಾತ್ರಿ ವಿಜಯರಾಯರು ಶೇಷಪ್ಪನ ಸ್ವಪ್ನದಲ್ಲಿ ಕಂಡು "ಶ್ರೀ ಗುರು ವಿಜಯ ವಿಠಲ" ನೆಂಬ ಅಂಕಿತವಿತ್ತು ಆಶೀರ್ವದಿಸಿದರು. ಅಲ್ಲಿಂದ ಹೊರಟು ಹಂಪಿ, ನವ ವೃಂದಾವನದ ದರ್ಶನಾಭಿಲಾಷಿಗಳಾಗಿ ಗಂಗಾವತಿ ಮಾರ್ಗ ಆನೆಗುಂದಿಗೆ ಬಂದು ನವವೃಂದಾವನವಿರುವ ತುಂಗಾನದಿಯ ನಡುಗಡ್ಡಿ ಸೇರಿ ಅಲ್ಲಿ ನದಿಯಲ್ಲಿ ಮಿಂದು ಕೆಲವು ದಿನ ಸೇವೆ ಮಾಡಿ ಪುನಃ ಚಿಂತರವೇಲಿಗೆ ಬಂದರು. ಹುತ್ತಿನಲ್ಲಿ ಕಂಡ ಮಾರುತಿರಾಯನ ನಿವಾಸವೇ ಚಿಂತರವೇಲಿ.

ಪುನಃ ಚಿಂತರವೇಲಿಯಲ್ಲಿ ಸೇವೆ ಮಾಡುತ್ತಿರಲು ಸುತ್ತಮುತ್ತಲಿನ ಹಳ್ಳಿವಾಸಿಗಳು ದಾಸರು ಚಿಂತರವೇಲಿಗೆ ಬಂದ ವಾರ್ತೆ ತಿಳಿದು ತಂಡೋಪ ತಂಡವಾಗಿ ಬಂದು ದರ್ಶನ ಭಾಗ್ಯ ಪಡೆದು ತಮ್ಮ ಆಪತ್ತನು ಪರಿಹಾರ ಮಾಡಿಕೊಂಡು ಹೋಗುತ್ತಿದ್ದಂತೆ ಗದ್ವಾಲಿಯಿಂದ ಮಹಾರಾಣಿ ವೆಂಕಟಲಕ್ಷ್ಮಮ್ಮನವರು ನೂತನವಾಗಿ ಎರಡನೇ ದತ್ತು ಪುತ್ರರಾದ ರಾಜಾಸೀತರಾಮಭೂಲನನ್ನು ಕರೆದು ಕೊಂಡು ದಾಸರ ಸನ್ನಿಧಿಗೆ ದರ್ಶನಾರ್ಥಿಯಾಗಿ ಬಂದರು. ದಾಸರು ವೆಂಕಟಲಕ್ಷ್ಮಮ್ಮನನ್ನು ಕಂಡು "ನಿಮ್ಮ ಹಿಂದೆ ಬಂದವರು ಯಾರೆಂದು ವಿಚಾರಿಸಲು ರಾಣಿ," ಸ್ವಾಮಿ ಮೊದಲು ತಮಗೆ ಮಾಡಬಾರದ ಅಪರಾಧ ಮಾಡಿದವನದು ದುಷ್ಕೃತ್ಯ ಬರು ಬರುತ್ತ ಅತಿಯಾಗಿ ಒಬ್ಬ ಮುಸಲ್ಮಾನನ ಕೈಯಲ್ಲಿ ಹತವಾದನು. ಪುನಃ ಈತನನ್ನು ದತ್ತು ಸ್ವೀಕರಿಸಿ ರಾಜ್ಯಕ್ಕೆ ಪಟ್ಟಾಭಿಷಿಕ್ತ ಮಾಡಿ ತಮ್ಮ ಆಶೀರ್ವಾದ ಪಡೆಯಲು ಕರೆದು ಕೊಂಡು ಬಂದಿರುವೆನು. ಈತನಿಗೆ ಒಳ್ಳೆಯದಾಗುವಂತೆ ಆಶೀರ್ವದಿಸಿರಿ." ಎಂದು ದಾಸರಿಗೆ ಉಭಯರು ದೀರ್ಘ ದಂಡ ಪ್ರಣಾಮವನ್ನು ಮಾಡಿ," ನಮ್ಮಿಂದ ಏನು ಸೇವೆ ಯಾಗಬೇಕು" ಎಂದು ಪ್ರಾರ್ಥಿಸಿದಳು ಮಹಾರಾಣಿ.

ರಾಣಿ ವೆಂಕಟಲಕ್ಷ್ಮಮ್ಮನ ಪಶ್ಚಾತ್ತಾಪ್ತ ಬುದ್ಧಿ ಮತ್ತು ಭಕ್ತಿಗೆ ಸಂತಸಗೊಂಡು ದಾಸರು "ಇಲ್ಲಿಯ ದೇವಾಲಯ ನಿರ್ಮಾಣವಾಗಬೇಕು." ಎಂದು ನುಡಿದರು. ದಾಸರ ಅಜ್ಞಾನು ಸಾರ ಕೆಲವೇ ಕಾಲದಲ್ಲಿ ಭವ್ಯವಾದ ಆಲಯದ ನಿರ್ಮಾಣವಾಯಿತು. ದಾಸರಿಗಾಗಿ ಪ್ರತ್ಯೇಕವಾಗಿ ಏಕಾಂತಕ್ಕೆ ಮೇಲು ಮಾಳಿಗೆಯಲ್ಲಿ ಒಂದು ಪ್ರತ್ಯೇಕ ಕೊಠಡಿ ನಿರ್ಮಾಣ ಮಾಡಿಸಲಾಯಿತು. ಆ ಕೊಠಡಿ ಇಂದಿಗೂ ಚಿಂತರವೇಲಿ ಆಲಯದಲ್ಲಿದೆ. ರಾಣಿ ವೆಂಕಟಲಕ್ಷ್ಮಮ್ಮನವರು ತನ್ನ ಪುತ್ರನಿಂದ ನೂತನ ಆಲಯದ ವಾಸ್ತು ಪೂಜೆ ಮಾಡಿಸಿದಳು ಮತ್ತು ದಾಸರಿಗೆ ವಸ್ತ್ರಾಲಂಕಾರದ ಮರ್ಯಾದೆ ಸಲ್ಲಿಸಿದಳು.

ಹಿಂದಕ್ಕೆ ಗದ್ವಾಲಿಯಲ್ಲಿ ಸೋಮಭೂಪಾಲನು ತನ್ನ ಕೈಯಿಂದ ದಾಸರನ್ನು ಅವಮಾನಿಸಿದ ನಾಗ ಬೆತ್ತ (ಊರುಗೋಲು)ವನ್ನು ಅಗ್ನಿಯಲ್ಲಿ ಹಾಕಿ ಸುಟ್ಟು ಹೋಗುವಂತೆ ಮಾಡಿಸಿದಳು.

ದಾಸರು ಭಕ್ತಾದಿಗಳ ಅಭೀಷ್ಟ ನೆರವೇರಿಸುತ್ತ, ಮಾರುತಿಯ ಸೇವೆ ಮಾಡುತ್ತ ಇರಲು ಒಂದು ರಾತ್ರಿ ಮಾರುತಿರಾಯನು ದಾಸರ ಸ್ವಪ್ನದಲ್ಲಿ ಕಂಡು "ಆದಿಶಿಲಾ ಕ್ಷೇತ್ರದಲ್ಲಿ ಶ್ರೀ ಶ್ರೀನಿವಾಸನ ಸೇವೆ ಮಾಡು. ನಾಳಿಗೆ ನಿನಗೆ ಛಳಿಜ್ವರ ಬರುವದು. ನನಗೆ ಅಭಿಷೇಕಮಾಡಿದ ನೀರು ಹೋಗಲು ಮಾಡಿದ ಬಿಲದಲ್ಲಿ ಒಂದು ವನಸ್ಪತಿ ಮೊಳಿಕೆ ಇದೆ. ಅದನ್ನು ಸೇವಿಸು, ಜ್ವರಹೋಗುವದು, ಮತ್ತು ನಾಳೇಯೇ ಶ್ರೀಕ್ಷೇತ್ರಕ್ಕೆ ಪ್ರಯಾಣ ಮಾಡು" ಎಂದು ಅಪ್ಪಣೆ ಇತ್ತನು. ವಾಯುದೇವರ ಆಜ್ಞಾನುಸಾರ ಆದಿಶಿಲಾಕ್ಷೇತ್ರಕ್ಕೆ ಹೋಗಿ ಕ್ಷೇತ್ರವಾಸಿಯಾದ ದೈವವನ್ನು ಸೇವಿಸುತ್ತಾ ಅಲ್ಲೆ ವಾಸ ಮಾಡಿ ಪ್ರತಿದಿನ ಆಲಯದ ಪಶ್ಚಿಮ ದ್ವಾರದ ಹೊರಗೆ ಇದ್ದ ಮಹಾರುದ್ರರನ್ನು ಉಪಾಸನಾ ಮಾಡುತ್ತ, ಎಷ್ಟೋ ಜನ ಭಕ್ತಾದಿಗಳ ಆಪತ್ತು ಪರಿಹರಿಸುತ್ತಿದ್ದರು. ಗದ್ವಾಲಿಯ ಪೂರ್ವದ ರಾಜರು ಮೊದಲು ಕಲ್ಲು ಕ್ಷೇತ್ರಕ್ಕೆ ಸಾಕಷ್ಟು ಭೂಮಿ (ಹೋಲಗಳೂ) ದಾನ ಮಾಡಿದ್ದರು. ಆದರಂತೆ ಚಿಂತರವೇಲಿ ಪ್ರಾಣ ದೇವರಿಗೂ ಸಹ ಭೂ ಆಸ್ತಿಯನ್ನಿತ್ತರು.

ಆ ಕಾಲಕ್ಕೆ ಗದ್ವಾಲಿ ಸಂಸ್ಥಾನ ರಾಯಚೂರು ಜಿಲ್ಲೆಗೆ ಸೇರಿತ್ತು. ಕಾರಣ ಹೈದರಾಬಾದು ಕರ್ನಾಟಕವೆನಿಸಿದ ರಾಯಚೂರು ಜಿಲ್ಲೆಗೆ ಸೇರಿದ ಕಲ್ಲೂರಿನಲ್ಲೂ ದಾಸರಿಗೆ ಹೊಲಗಳು ಸಂದಿದ್ದವು. ಕಲ್ಲೂರು ಶಾನಭೋಗರಾದ ಕೃಷ್ಣಪ್ಪನವರು ದಾಸರ ಹೊಲಗಳನ್ನು ಸಾಗುವಳಿಗೆ ಕೊಟ್ಟು ನೋಡಿಕೊಳ್ಳುತ್ತಿದ್ದರು. ದಾಸರ ಮೇಲೆ ಅವರಿಗೆ ಅಪಾರ ಭಕ್ತಿಗೌರವಗಳಿದ್ದವು. ಅವರ ಸೇವೆ ಅಪಾರವಾಗಿತ್ತು. ಇದರಂತೆ ಮೆಹಬೂಬುನಗರ ಜಿಲ್ಲೆಯ ಅನೇಕಾ ತಾಲ್ಲೂಕುಗಳಲ್ಲಿ ಹೊಲಗಳಿದ್ದವು. ದಾಸರು ಎಲ್ಲಾ ಕಡೆಗಳಲ್ಲಿ ಹೋಗಿ ಹಪ್ತಿ ವಸೂಲು ಮಾಡುತ್ತಿದ್ದರು. ದಾಸರು ಚಿಂತರವೇಲಿಯಲ್ಲಿ ಇದ್ದಾಗ ಬ್ರಾಹ್ಮಣರನೇಕರು ಬಂದು ಸೇವೆ ಮಾಡುತ್ತಿದ್ದರು. ಅದೇ ರೀತಿ ಮೊದಲು ಕಲ್ಲು ಕ್ಷೇತ್ರಕ್ಕೆ ಸೇವೆಗಾಗಿ ಬಂದ ಅನೇಕ ವಿಪ್ರರಿಗೆ ಅನ್ನ ಸಂತರ್ಪಣೆ ನಡೆಯುತ್ತಿತ್ತು. ರೇವನಹಳ್ಳಿ ತಿಮ್ಮಪ್ಪನವರು ಇವರ ದಾಸಾನು ದಾಸರಾಗಿ ಬಿಟ್ಟಿದ್ದರು. ಖಜಾನದಾರ್ ಶ್ರೀನಿವಾಸರಾಯರು, ದಿವಾನ್ ಗೋವಿಂದರಾಯರು ಇವರ ಪರಮಶಿಷ್ಯರು. ಶೇಷಪ್ಪನವರಿಗೆ ಶ್ರೀ ವಿಜಯದಾಸರು ಶ್ರೀ ಗುರುವಿಜಯ ವಿಠಲರೆಂದು ಅಂಕಿತವನನ್ನಿತ್ತರೂ. ಇವರ ವ್ಯವಹಾರ ನಾಮದ ಜತೆಗೆ ದಾಸರೆಂದು ಜನವಾಡಿಕೆಯಾಗಿತ್ತು. ಶ್ರೀ ಶೇಷದಾಸರ ಸನ್ನಿಧಿಯಲ್ಲಿ ನಿತ್ಯವೂ ಎಣಿಕೆಗೆ ಮೀರಿದ ಅನ್ನದಾನ ಸದಾ ಭಗವಧ್ಯಾನ, ಪುರಾಣಪ್ರವಚನ, ವೇದೋಪನಿಷತ್ತುಗಳ ಸಂಚಯನ, ಗೀತ, ಸಂಗೀತಯುಕ್ತ ಆರಾಧನೆ ನಡೆಯುತ್ತಿದ್ದವು.

ಆದಿ ಶಿಲಾಕ್ಷೇತ್ರದ ಬಗ್ಗೆ ಬ್ರಹ್ಮಾಂಡ ಪುರಾಣದಲ್ಲಿ ಅದರ ಮಹತ್ವವನ್ನು ವಿಶದೀಕರಿಸಿರುವುದು. ಅದೇನಂದರೆ (1) ಶ್ವೇತ ದ್ವಿಪ, (2) ಅನಂತಾಸನ, (3) ವೈಕುಂಠ ವೆಂಬಸ್ಥಾನ ತ್ರಯಗಳಂತೆ ಈ ಕಾಲದ ಮಾನವರ ಶಕ್ತಿ ಬುದ್ಧಿ ಆಯುಸ್ಸು ಮೊದಲಾದವುಗಳನ್ನು ಗಮನಿಸಿ

ಜೀವನ ಯೋಗ್ಯತಾನುಸಾರವಾಗಿ ಸುಖ - ದುಃಖ, ಫಲಾಫಲಗಳನ್ನು ಕೊಟ್ಟುವುದ್ಧರಿಸುವ ಹೊಣೆ ಪರಮಾತ್ಮನ ಕರ್ತವ್ಯವಾದ ಕಾರಣ ಈ ಭೂಮಂಡಲದಲ್ಲಿ ಭಾವಪೂರಿತವುಗಳಾದ ಗಿರಿಶಾಚಲ, ಶೇಷಾಚಲ ಗರುಡಚಲವೆಂದು ಮೂರು ಪಾವನ ಕ್ಷೇತ್ರಗಳು ನಿರ್ಮಿತವಾಗಿದೆ.

(1) ಶ್ವೇತ ದ್ವೀಪ - ಎಂದು ಅನ್ನುವ ಪದಕ್ಕೆ ಬಿಳಿಯ ದ್ವೀಪ ಎಂದು ಅರ್ಥ. ಇಲ್ಲಿಯ ಆದಿಶಿಲಾಕ್ಷೇತ್ರದಲ್ಲಿ ಶ್ರೀವೆಂಕಟೇಶನ ಪರ್ವತಕ್ಕೆ ಗಿರಿಶಾ ಚಲವೆಂದು ಹೆಸರು. ಅಂದರೆ ರುದ್ರಗಿರಿ ಮಹಾರುದ್ರನಿರುವ ಪರ್ವತಕ್ಕೆ ರಜತಗಿರಿ. ಹಿಮಾಚಲವೆಂದೂ ಒಟ್ಟಿಗೆ ಶ್ವೇತ ಶಬ್ದವಾಚ್ಯ ವಾಗಿರುವದು. ಆದಕಾರಣ ಗಿರಿಶಾಚಲ ಪರ್ವತದಲ್ಲಿ ವೈಕುಂಠ ಪತಿಯಾದ ವೆಂಕಟೇಶ್ವರ ನಿರುವುದರಿಂದ ಗಿರಿಶಾಚಲಕ್ಕೆ ಶ್ವೇತ ದ್ವೀಪ ಅನಲು ಅಭ್ಯಂತರವೇನೂ ಇಲ್ಲ.

(2) ಅನಂತಾಸನ :- ಅನಂತನೆಂಬುವ ಹೆಸರು ಶೇಷನಿಗಿರುವುದು. ತಿರುಪತಿಗೆ ಶೇಷಾಚಲ ಎಂದು ಹೆಸರು. ಆದಿಶೇಷನು ಪರ್ವತ ರೂಪದಿಂದಿರುವಾಗ ಅಂಥ ಪರ್ವತಾಸನದ ಮೇಲೆ ಶ್ರೀವೆಂಕಟೇಶನು ಇದ್ದುದರಿಂದ ತಿರುಪತಿ ಕ್ಷೇತ್ರಕ್ಕೆ ಅನಂತಾಸನವೆಂದು ಕರೆಯಲು ಯಾವ ಬಾಧಕವಿಲ್ಲ.

(3) ವೈಕುಂಠ :- ಅಂದರೆ ನಾಶವಿಲ್ಲದ್ದು ಎಂದು ಅರ್ಥ ವಿಷ್ಣುವಿನ ನಿವಾಸ ಸ್ಥಾನವೆಂದು, ವಿಷ್ಣುವಿನ ಮುಖ್ಯವಾದ ವಾಹನ ಗರುಡನೆಂದೂ, ಸುಪ್ರಸಿದ್ಧವಾದದ್ದು. ವಿಷ್ಣುವು ಅನ್ನುವ ನಾಮವು ಸರ್ವವ್ಯಾಪ್ತಿತ್ವದಿಂದ ಬಂದದ್ದು. ಆ ವ್ಯಾಪ್ತಿತ್ವವನ್ನು ಪ್ರಕಟಗೊಳಿಸುವದಕ್ಕಾಗಿ ಪ್ರಹ್ಲಾದನ ಕೋರಿಕೆಯ ಪ್ರಕಾರ ಸ್ತಂಭದಿಂದ ನೃಸಿಂಹರೂಪದಿಂದ ಆವಿರ್ಭವಿಸಿದನು. ಅಂಥ ನರಸಿಂಹನ ಮುಖ್ಯ ವಾಹನ ಗರುಡಾ ಚಲವೆಂದು ಸುಪ್ರಸಿದ್ಧವಾದ ಅಹೋಭಲಪರ್ವತ. ಆ ಗರುಡಾಚಲವೆ ವೈಕುಂಠವೆಂದು ನಿರ್ಭಯವಾಗಿ ಹೇಳಬಹುದು.

ಇಂಥ ಭಾವ ಪೂರಿತವುಗಳಾದ ಸೂಚನೆಗಳು ಪ್ರಕಟಿಸುವಂಥ ಗಿರಿಶಾ ಚಲ - ಶೇಷಚಲ - ಗರುಡಾಚಲಗಳೇ ಸ್ಥಾನತ್ರಯಗಳು. ಇವೇ ಶ್ವೇತ ದ್ವೀಪ - ಅನಂತಾಸನ ವೈಕುಂಠಗಳಾಗಿ ಈ ಕಾಲದ ಮಾನವರ, ಶಕ್ತಿಬುದ್ಧಿ ಆಯುವು ಮೊದಲಾದವುಗಳನ್ನು ಮನದಲ್ಲಿಟ್ಟು ಜೀವಿಯ ಯೋಗ್ಯತಾನುಸಾರಸುಖ - ದುಃಖ - ಫಲಾಪಲಗಳನ್ನಿತ್ತು ಉದ್ಧರಿಸುವದು ಪರಮಾತ್ಮನ ಹೊಣೆಯಾದ್ದರಿಂದ ನಿರ್ಮಯಿಸಿರುವನೆಂದು ಸ್ಪಷ್ಟವಾಗಿ ಹೇಳಬಹುದು.

ಇಂಥ ಪಾವನ ಕ್ಷೇತ್ರವಾದುದರಿಂದ ಈ ಪ್ರದೇಶದಲ್ಲಿ ದೇವತೆಗಳು - ಋಷಿ ಪುಂಗವರು ಎಷ್ಟೋ ಜನ ಅವತರಿಸಿ ಅನೇಕ ಭಕ್ತ ಕೋಟಿಯ ಉದ್ಧಾರ ಮಾಡಿ, ಕೈವಲ್ಯವನ್ನು ಸೇರಿದರು. ಇದಕ್ಕಾಗಿ ಮಹಾ ಕ್ಷೇತ್ರವಾದ ಆದಿಶಿಲಾ ಕ್ಷೇತ್ರಕ್ಕೆ (ಮೊದಲು ಕಲ್ಲು) ಶ್ರೀ ವಾಯುದೇವರೆ ಶ್ರೀ ಶ್ರೀನಿವಾಸನ ಸೇವೆಗಾಗಿ ಶ್ರೀ ಶೇಷದಾಸರನ್ನು ಕಳಿಸಿದರು. ಅಲ್ಲಿ ದೇವಸ್ಥಾನದ ಎದುರುಗಡೆ ಒಂದು ಛತ್ರ ಕಟ್ಟಿಸಿ ಅದರ ಮೇಲೆ ತಮಗೆ ಏಕಾಂತ ಧ್ಯಾನಕ್ಕಾಗಿ ಒಂದು ಕೊಠಡಿಯನ್ನು ಕಟ್ಟಿಸಿರುವರು. ಅದು ಈಗಲು ಇದೆ, ದಾಸರ ಜನನಕ್ಕೆ ಪೂರ್ವದಲ್ಲಿ ದೇವಾಸ್ಥಾನವನ್ನು ಕಟ್ಟಿಸಿದ ರಾಜನ ವಿವರ ಹೀಗಿದೆ.

ಸುಮಾರು ನಾಲ್ಕು ನೂರು ವರ್ಷದ ಕೆಳಗೆ ಗದ್ವಾಲ ರಾಜ್ಯಸ್ಥಾಪನೆ ಮಾಡಿದ ಗದ್ವಾಲ ಕೋಟೆ ಕಂಥಕಗಳನ್ನು ನಿರ್ಮಿಸಿದ ರಾಜನ ಹೆಸರು ನಲ ಸೋಮನಾದ್ರಿ ಆತನಿಗೆ ಮೃಗಗಳ ಬೇಟೆಯಾಡುವ ಕೋರಿಕೆ ಬಹಳ ವಿತ್ತು ಒಂದು ದಿನ ರಾಜನು ಬೇಟೆಗಾಗಿ ಈ ಪ್ರಾಂತಕ್ಕೆ ಬಂದನು. ಆ ಕಾಲದಲ್ಲಿ ಈ ಪ್ರಾಂತವು ದಟ್ಟವಾದ ಗಿಡ ವೃಕ್ಷಗಳಿಂದ ಮಹಾ ಅರಣ್ಯವಾಗಿತ್ತು. ವನ್ಯಮೃಗಗಳನ್ನು ಬೇಟೆಯಾಡುತ್ತ ಶ್ರೀವೆಂಕಟೇಶನಿರುವ ಗುಂಡಿನ ಹತ್ತಿರಕ್ಕೆ ಬರುತ್ತಲೆ ತಾನು ಅಧಿರೋಹಿಸಿದ ಅಶ್ವವು ನಿಂತುಬಿಟ್ಟಿತು. ಎಷ್ಟು ಹೋಡೆದರೂ ಕುದುರೆ ಮುಂದಕ್ಕೆ ಹೋಗಲಿಲ್ಲ. ಕಾರಣವೇನು ತಿಳಿಯಲಿಲ್ಲ. ವಿಸ್ಮಯ ಚಿಕಿತನಾದ ರಾಜನು ಅಲ್ಲೇ ಪಶುವುಗಳನ್ನು ಮೇಯಿಸುತ್ತಿದ್ದ ದನಗಾವಲನನ್ನು ಕಂಡು ಅವನನ್ನು ಸಮೀಪಕ್ಕೆ ಕರೆದು, ಅವನೊಂದಿಗೆ ತನ್ನ ಕುದುರೆ ಮುಂದಕ್ಕೆ ಹೋಗದಿರುವುದನ್ನು ತಿಳಿಸಿ, ಇಲ್ಲಿ ಏನಾದರು ವಿಶೇಷವಿರುವುದೇ? ಎಂದು ಪ್ರಶ್ನಿಸಲು ಬಾಲಕನು ಅಲ್ಲೇ ದೊಡ್ಡ ಗುಂಡುಗಳ ಮಧ್ಯದಲ್ಲಿ ಶ್ರೀವೆಂಕಟೇಶನ ಸನ್ನಿಧಾನವನ್ನು ತೋರಿಸಿದನು. "ವಿಶೇಷ ಪರ್ವದಿನಗಳಲ್ಲಿ ಈ ಸುತ್ತ ಮುತ್ತ ಇರುವ ಹಳ್ಳಿ ಜನರು ಬಂದು ಈತನನ್ನು ಪೂಜಿಸಿ ತಮ್ಮ ಇಷ್ಟಾರ್ಥಗಳನ್ನು ಪಡೆಯುವರೆಂದು ತಿಳಿಸಿದನು. ಆಗ ರಾಜನು ಆ ಬಾಲಕನ ಸಹಾಯದಿಂದ ಅಲ್ಲಿದ್ದ ಗಿಡ ಬಳ್ಳಿಗಳನ್ನು ಕಿತ್ತೆಸೆದು ಸ್ವಾಮಿಯನ್ನು ಕಂಡು "ಹೇ ಸ್ವಾಮಿ ! ಚತುರ್ದಶ ನಿರ್ಮಿಸಿದ ಜಗತ್ಪ್ರಭುವೆ" ನಾನು ಒಬ್ಬ ಪಾಮರನಾದ ಮಾನವನು. ಈಗ ನಿನ್ನಲ್ಲಿ ಅತಿ ಭಕ್ತಿ ಹುಟ್ಟುವಂತೆ ಮಾಡಿದೆ. ಮೊದಲಿನಂತೆ ನನ್ನ ಅಶ್ವವು ವೇಗವಾಗಿ ನನ್ನ ಸ್ವಸ್ಥಾನಕ್ಕೆ ಹೋಗುವಂತೆ ಮಾಡು. ನನ್ನ ಅಪರಾಧವನ್ನು ಕ್ಷಮಿಸಬೇಕು. ನನ್ನ ಸ್ಥಾನಕ್ಕೆ ಹೋಗಿ ನಿನಗೆ ಒಂದು ಸುಂದರವಾದ ದೇವಸ್ಥಾನ ಕಟ್ಟಿಸುವ ಎಲ್ಲಾ ವಿಧದ ಏರ್ಪಾಟು ಮಾಡುವೆನು ಮತ್ತು ಒಂದು ರಥವನ್ನು ಮಾಡಿಸಿ ಅದರಲ್ಲಿ ನಿನ್ನನ್ನು ಕೂಡಿಸಿ ರಥೋತ್ಸವ, ಜಾತ್ರೆ ನಡೆಯುವಂತೆ ಮಾಡುವೆನು. ನಿರಂತರ ನಿನ್ನ ಪೂಜಾಕೈಂಕಾರ್ಯಗಳು ನಡೆಯುವಂತೆ ಭೂಮಿಕಾಣಿಕೆಗಳನ್ನು ಅರ್ಪಿಸುವೆನು. ನನಗೆ ಸೇವಾಭಾಗ್ಯವನ್ನು ಪ್ರಸಾದಿಸು ಎಂದು ಸ್ವಾಮಿಯ ಪಾದಗಳ ಮೇಲೆ ಬಿದ್ದು ಮನಸಾರಾ ನಮಸ್ಕರಿಸಿದನು ತನ್ನ ಅಂತರಂಗದಲ್ಲಿ ಏನೂ ತಿಳಿಯಲಾರದ ಉತ್ಸಾಹ ಉಕ್ಕಿ ತನ್ನ ಕುದುರೆಯ ಹತ್ತಿರ ಬಂದು ಅಧಿರೊಹಿಸಿ ಪ್ರಯಾಣೋನ್ಮುಖನಾದನು. ಮೊದಲಿನಂತೆ ಕುದುರೆ ಅತ್ಯಂತ ವೇಗದಿಂದ ಪ್ರಯಾಣ ಮಾಡಿ ಮನಿಯನ್ನು ತಲುಪಿತು.

ತನ್ನ ಬೇಡಿಕೆಯ ಪ್ರಕಾರ ಆಲಯ ನಿರ್ಮಾಣ ಮಾಡಿಸಿ, ರಥವನ್ನು ಮಾಡಿಸಿ ಅಪಾರವಾದ ಭೂ-ಕಾಣಿಕೆಗಳನ್ನು ಅರ್ಪಿಸಿದನು. ಸೂರ್ಯಚಂದ್ರಾದಿಗಳಿರುವವರೆಗೆ ನಿರಂತರ ಪೂಜೆ ನಡೆಯುವಂತೆ ಏರ್ಪಾಟು ಮಾಡಿದನು. ತನಗೆ ದೇವರನ್ನು ತೋರಿಸಿದ ಆ ಬೇಡರ ಬಾಲಕನನ್ನು ವಂಶಪಾರಂಪರ್ಯ ಸ್ವಾಮಿ ಪೂಜೆ ಮಾಡಲು ನಿಯುಕ್ತಿ ಮಾಡಿದನು. ಅದೇ ವಂಶಜರೇ ಇಂದಿನವರೆಗೂ ಅರ್ಚನೆ ಮಾಡುತ್ತಿರುವರು. ಶ್ರೀವೆಂಕಟೇಶನ ಮಹಿಮೆ ಅಪಾರವಾದದ್ದು. ಮಾರ್ಗಶಿರ ಶುದ್ಧ ಪೂರ್ಣಿಮ ಪ್ರತಿ ವರ್ಷ ರಥೋತ್ಸವ ನಡೆಯುತ್ತಿದೆ. ಹದಿನೈದು ದಿನಗಳದೊಡ್ಡ ಜಾತ್ರೆ ಇಂದಿಗೂ ನಡೆಯುವದು. ಆದಿ ಶಿಲಾಕ್ಷೇತ್ರದ ಬಗ್ಗೆ ಬ್ರಹ್ಮಾಂಡ ಪುರಾಣದಲ್ಲಿ ನಾಲ್ಕು ಅಧ್ಯಾಯಗಳಾಗಿ

ಸಂಸ್ಕೃತ ಶ್ಲೋಕಗಳಲ್ಲಿ ವಿವರ ವಿದೆ. ಅದಕ್ಕಾಗಿ ಇಲ್ಲಿ ಸಂಕ್ಷಿಪ್ತವಾಗಿ ತಿಳಿಸಲಾಗಿದೆ.

ದೇವಾಲಯ ನಿರ್ಮಾಣವಾದ ಮೇಲೆ ಶ್ರೀ ಶೇಷದಾಸಾರ್ಯರು ಮುನ್ನೂರು ವರ್ಷಗಳಾದ ನಂತರ ಬಂದಿದ್ದರು. ದಾಸರು ತಮ್ಮ ಏಕಾಂತ ಧ್ಯಾನಕ್ಕಾಗಿ ತಾವು ನಿರ್ಮಾಣ ಮಾಡಿದ ಛತ್ರದ ಮೇಲೆ ಪ್ರತ್ಯೇಕವಾಗಿ ಒಂದು ಕೊಠಡಿ ಕಟ್ಟಿಸಿದರು. ಅದು ಇಂದಿಗು ಇರುವದು.

ಶ್ರೀ ಶ್ರೀನಿವಾಸನ ಮಂದಿರದಿಂದ ಪಶ್ಚಿಮ ದಿಕ್ಕಿನಲ್ಲಿ ಶ್ರೀರುದ್ರ ದೇವರ ಆಲಯವಿರುವದು. ದಾಸರಾಯರ ಉಪಾಸನಾದೇವರು ರುದ್ರ ದೇವರು. ಮನೋನಿಯಮಕರಾದ ಪರಮ ಶಿವನನ್ನೇ ಉಪಾಸನ ಮಾಡುತ್ತಿದ್ದರು. ಈ ಶಿವಾಲಯದಲ್ಲಿ ಅನೇಕ ಮಹತ್ವಗಳು ಪ್ರಜೆಗಳಿಗೆ ತೋರಿಸಿದರು. ಶ್ರೀವೆಂಕಟೇಶನ ದೇವಾಲಯಕ್ಕೆ ದಕ್ಷಿಣ ದಿಶದಲ್ಲಿ ಒಂದು ಕಿಲೋ ಮೀಟರು ದೂರದಲ್ಲಿ ಒಂದು ಪರ್ವತವಿದೆ. ಶ್ರೀನಿವಾಸನ ಸೇವೆ ಮಾಡಿಕೊಂಡು ಆ ಪರ್ವತಕ್ಕೆ ಹೋಗಿ ಅಲ್ಲಿ ಗುಹೆಯಲ್ಲಿ ದೈವಚಿಂತನ, ತಪಸ್ಸು ಮಾಡುತ್ತಿದ್ದರು. ಇವರ ತಪಕ್ಕೆ ಶ್ರೀನಿವಾಸನು ಆ ಗುಹೆಯಲ್ಲಿ ಒಂದು ಗುಂಡಿನ ಮೇಲೆ ಪ್ರತ್ಯಕ್ಷನಾಗಿರುವನು. ಇಂದಿಗೂ ಬಹಳ ಜನರು ಅಲ್ಲಿಯ ದರ್ಶನ ಭಾಗ್ಯ ಪಡೆಯುತ್ತಿರುವರು. ಆದಿ ಶಿಲಾ ಕ್ಷೇತ್ರ (ಮೊದಲ ಕಲ್ಲು) ಪರಮ ಪವಿತ್ರವಾದದ್ದೆಂದು, ದಾಸರು ಬಂದ ಭಕ್ತಾದಿಗಳಿಗೆ ಹೇಳುತ್ತಿದ್ದರು. ಇಂದಿಗೂ ಯಾತ್ರಿಕರಿಗೆ ತೀರ್ಥ ಪ್ರಸಾದ ಭೋಜನ ನಡೆಯುತ್ತಿದೆ. ಭಕ್ತರ ಸಕಲ ಇಷ್ಟಾರ್ಥಗಳು ಇಲ್ಲಿ ಫಲಿಸುವವು ಎಂದು ಹೇಳುತ್ತಿದ್ದರು. ಒಮ್ಮೆ ಅನೇಕ ಭಕ್ತರು ಕಲಿತು ಕಾಶಿ ಯಾತ್ರೆ ಮಾಡಲು ಪ್ರಯಾಣ ಮಾಡುತ್ತ ಮೊದಲು ಕಲ್ಲುಕ್ಷೇತ್ರಕ್ಕೆ ಬಂದು ಸ್ವಾಮಿ ದರ್ಶನ ಮಾಡಿ ದಾಸರನ್ನು ಕಂಡು. ನಮಸ್ಕರಿಸಿ, ತಾವು ಕಾಶಿ ಕ್ಷೇತ್ರದಲ್ಲಿ ಗಂಗೆಯಲ್ಲಿ ಮಿಂದು ವಿಶ್ವನಾಥನ ದರ್ಶನಕ್ಕೆ ಹೋರಟಿರುವವೆಂದು ತಿಳಿಸಿದರು. ಆಗ ದಾಸವರ್ಯರು. ನಿಮಗೆ ಗಂಗಾಸ್ನಾನ, ವಿಶ್ವನಾಥನ ದರ್ಶನ ಬೇಕಾಗಿದೆಯಷ್ಟೇ! ಎಲ್ಲಾ ಇಲ್ಲೆ ನಿಮಗೆ ಸಿಗುವುದು ಎಂದು ಎಲ್ಲರನ್ನು ದೇವಾಲಯ ಪ್ರವೇಶ ಮಾಡಿಸಿ, ತಾವು ಶ್ರೀನಿವಾಸನ ಮುಂದೆ ಕುಳಿತು ಪ್ರಾರ್ಥನೆ ಮಾಡಿದರು. ಸ್ವಲ್ಪ ಹೋತ್ತಿನಲ್ಲಿ ಶ್ರೀವೆಂಕಟೇಶನ ಪಾದದ ಕೆಳಗಿನಿಂದ ಗಂಗಾದೇವಿ ಬುಳಬುಳನೆ ಹೊರಗೆ ಬಂದು ಹರಿಯಲಾರಂಭಿಸಿದಳು. ಎಲ್ಲಾ ಭಕ್ತರು ಸ್ನಾನ ಮಾಡಿದರು. ಅಲ್ಲೆ ಶ್ರೀವಿಶ್ವನಾಥನ ದರ್ಶನವಾಯಿತು. ಎಲ್ಲರು ಸಂತೋಷ ಪಟ್ಟರು. ಶ್ರೀಹರಿಯ ಪಾದದಿಂದ ಉದ್ಭವಿಸಿದ ಗಂಗಾ ಜಲವನ್ನು ದಾಸರು ಒಂದು ಹಿತ್ತಾಳಿಯ ಹೂಜಿಯಲ್ಲಿ ತುಂಬಿ ಛತ್ರದಲ್ಲಿ ತಮ್ಮ ದೇವತಾ ಮಂದಿರದಲ್ಲಿಟ್ಟರು. ಆ ಹೂಜಿ ಇಂದಿಗೂ ಪೂಜಾಗೃಹದಲ್ಲಿದೆ. ಲೇಖಕನ ತಾತಂದಿರು ಆ ಜಲವನ್ನು ಸ್ವೀಕರಿಸಿದ್ದರು. ಮತ್ತು ದಾಸ ವರ್ಯರನ್ನು ಕಂಡು ನಮಸ್ಕಾರ ಮಾಡಿದ್ದರು. ಈಗ ಆ ಹೂಜೆ ಥರೂರಲ್ಲಿ ಪಾರ್ಥ ಸಾರಥಿಗುಡಿಯಲ್ಲಿದೆ.

ಶ್ರೀಮೊದಲಕಲ್ಲು ಕ್ಷೇತ್ರದಲ್ಲಿ ದಾಸವರೇಣ್ಯರು ಅನೇಕಾನೇಕ ಮಹಿಮೆಗಳನ್ನು ತೋರಿರುವರು. ಇವರು ರಾತ್ರಿ ವೇಳೆಯಲ್ಲಿ ವೆಂಕಟೇಶನು ಪ್ರತ್ಯಕ್ಷನಾದ ಗವಿಯಲ್ಲೆ ಇರುತ್ತಿದ್ದರು. ದಾಸರನ್ನು ನೋಡಲು. ಇವರೊಬ್ಬ ಶ್ರೀಮಂತರಂತೆ ಕಾಣುತ್ತಿದ್ದರು. ಕೈಯಲ್ಲಿ ಹತ್ತು ಬೆರಳುಗಳಿಗೆ ವಜ್ರದ ಉಂಗುರಗಳಿದ್ದು ಕೊರಳಲ್ಲಿ ಬಂಗಾರದ "ಅಸಿಲಿ"ಯೆಂಬ ಕಂಠಿ ಮುತ್ತಿನ ಹಾರ ರೇಷ್ಮೆಯ

ಪಗಡಿ ತಲೆಗೆ ಸುತ್ತಿರುತ್ತಿದ್ದರು, ಜರತಾರಿ ಪಂಚೆಯನ್ನುಡುತ್ತಿದ್ದರು. ಇವರ ಆಕಾರ ರಾಜರಂತೆ ಸುಂದರವಾದ ದೇಹವುಳ್ಳವರಾಗಿದ್ದರು. ಒಂದು ದಿನ ನಾಲ್ವರು ಕಳ್ಳರು ರಾತ್ರಿಯಲ್ಲಿ ಗುಡ್ಡದ ಗುಹೆಯಲ್ಲಿ ದಾಸರು ಧ್ಯಾನ ಮಗ್ನರಾಗಿದ್ದಾಗ ಅವರ ಬಂಗಾರದ ಒಡೆವೆಗಳನ್ನು ನೋಡಿ ದೋಚಿಕೊಳ್ಳುವ ಬುದ್ಧಿಯಿಂದ ಅರ್ಧ ರಾತ್ರಿಯಲ್ಲಿ ಗುಡ್ಡವನ್ನು ಹತ್ತುತ್ತಿರಲು ಅರ್ಧಹಾದಿ ನಡೆದ ಮೇಲೆ ಆ ನಾಲ್ವರಿಗೆ ಕಣ್ಣುಗಳೇ ಕಾಣದಾದವು. ಸುತ್ತಲು ಎಡವುತ್ತ ಏನೋ ಕಾಣದೆ ಅಲ್ಲೇ ಕುಳಿತು ಬಿಟ್ಟರು. ಪ್ರಾಂತಃ ಕಾಲದಲ್ಲಿ ದಾಸರು ಗವಿಯಿಂದ ಹೋರಬಂದು ದೇವಾಲಯಕ್ಕೆ ಪ್ರಯಾಣ ಬೆಳೆಸಿದರು. ದಾರಿಯ ಮಧ್ಯ ನಾಲ್ವರು ಅಳುತ್ತ ಕುಳಿತವರನ್ನು ಕಂಡು ದಾಸರು "ಏನೋ, ಏತಕ್ಕೆ ಅಳುತ್ತ ಇಲ್ಲಿ ಕುಳಿತಿರುವಿರಿ? ಏನಾಯಿತು" ಎಂದು ವಿಚಾರಿಸಲು, ಕಳ್ಳರು ದಾಸರ ಪಾದದ ಮೇಲೆ ಬಿದ್ದು. "ನಾವು ನಿಮ್ಮ ದೇಹದ ಮೇಲಿನ ಒಡೆವೆಗಳನ್ನು ಕದಿಯಲು ಇಲ್ಲಿಯವರೆಗೆ ಸಂತೋಷದಿಂದ ಬಂದೆವು. ಇಲ್ಲಿಗೆ ಬರುತ್ತಲೆ ಕಣ್ಣುಗಳೇ ಕಾಣಿಸಲಿಲ್ಲ. ದಾರಿ ತಿಳಿಯದೆ ಎಡವಿ ಬಿದ್ದೆವು. ಕೈಕಾಲುಗಳಿಗೆ ಪೆಟ್ಟು ಹತ್ತಿತು. ಮುಂದೇನು ಗತಿಯೆಂದು ಅಳುತ್ತಿದ್ದೆವು. ತಾವು ನಮ್ಮ ಅಪರಾಧವನ್ನು ಕ್ಷಮಿಸಿ, ತಿರುಗಿ ನಮ್ಮ ಕಣ್ಣು ಕಾಣುವಂತೆ ಮಾಡಿರಿ." ಎಂದು ಪುನಃ ದಾಸರ ಪಾದಗಳಿಗೆರಗಿದರು. ದಯಾಮಯರಾದ ದಾಸರು ಅವರ ಶಿರಗಳನ್ನು ಮುಟ್ಟುತ್ತಲೆ ಕಣ್ಣುಗಳು ಕಾಣಿಸ ಹತ್ತಿದವು. ದಾಸರು ತಮ್ಮ ಬೆರಳಿನ ಹತ್ತುವುಂಗರಗಳನ್ನು, ಕಂಠದಲ್ಲಿ ಕಂಠಿ, ಮುತ್ತಿನ ಸರಗಳನ್ನು ತೆಗೆದು ಕಳ್ಳರಿಗೆ "ತೆಗೆದು ಕೊಳ್ಳಿ ನೀವು ನೋಡಿದ ಒಡೆವೆ, ಉಂಗುರಗಳಿವೆ" ಎಂದು ಕೊಡಲು ಹೋದರು. "ಬೇಡ ಬುದ್ದಿ, ಇವುಗಳಿಗಾಗಿ ನಾವು ಈ ಅಪರಾಧ ಮಾಡಿದೆವು ಕ್ಷಮೀಸಬೇಕು" ಎಂದು ನಮಸ್ಕಾರ ಮಾಡಲು "ಇವುಗಳನ್ನು ತೆಗೆದು ಕೊಳ್ಳಿ ಆದರೆ ಮುಂದೆ ಎಂದು ಕಳ್ಳತನ ಮಾಡಬೇಡಿ ದುಡಿದು ಸಂಪಾದಿಸಿರಿ", ಎಂದು ದಾಸರು ಕಳ್ಳರಿಗೆ ವುಂಗುರ ಕಂಠಿಗಳನ್ನು ಕೊಟ್ಟು ಬಿಟ್ಟರು. ಕಳ್ಳರು ಮುಂದೆ ಕಳ್ಳತನ ಬಿಟ್ಟು ಕಷ್ಟ ಪಟ್ಟು ಜೀವಿಸ ಹತ್ತಿದರು. ರಾಜರಿಂದ, ಪ್ರಜೆಗಳಿಂದ ಸಂಪೂಜ್ಯರಾದ ಶೇಷದಾಸರಿಗೆ ಮೇನೆಯುಕ್ತ ಹಗಲು ದೀವಟಿಗೆಯ ಮರ್ಯಾದೆಯೂ ಸಂದಿತು.

ದಾಸರು ತಮ್ಮ ಮಗನಿಗೆ ತಮ್ಮ ಮಗಳ ಮಗಳನ್ನೆ ಮದುವೆ ಮಾಡಿದ್ದರು. ಆ ಮೊಮ್ಮಗಳು ಸೋಸೆಯ ಮೇಲೆ ವಿಶೇಷ ಮಮತೆ ಯುಳ್ಳವರಾಗಿದ್ದರು. ಸೋಸೆಯಾದ ಆ ಮೊಮ್ಮಗಳು ಪ್ರತಿವರ್ಷವೂ ಟೀಕಾರಾಯರ ಆರಾಧನೆಗೆ ಹೋಗಲು ಹಂಬಲಿಸಿದಾಗ "ಅವರು ಇಲ್ಲಿಯೂ ಇದ್ದಾರಮ್ಮ" ಎಂದು ಹೇಳುತ್ತಿದ್ದರು. ಆದರೆ ಕೊನಗೆ ಆಕೆಯನ್ನು ಸಂತೈಸಲಾರದೆ ತಮ್ಮನು ಹೊರತು ಪಡಿಸಿ ಎಲ್ಲರನ್ನೂ ಮಳಖೇಡಕ್ಕೆ ಕಳಿಸಿದರು. ಜಯತೀರ್ಥರ ಆರಾಧನೆ ಸಂದರ್ಭ. ಅಲಂಕೃತ ಬೃಂದಾವನವನ್ನು ವೀಕ್ಷಿಸಲು ನೂರಾರು ಭಕ್ತಾದಿಗಳು ಸಾಲುಗಟ್ಟಿ ನಿಂತಿದ್ದಾರೆ.

ದಾಸರ ಮೊಮ್ಮಗಳು ಬಹುದಿನದ ಬಯಕೆ ತೀರಿತೆಂದು ಟೀಕಾರಾಯರ ಬೃಂದಾವನವನ್ನು ಕಣ್ತುಂಬ ನೋಡು ನೋಡುತ್ತಿದ್ದಂತೆ ಆ ಬೃಂದಾವನ ಮುಂದೆ ಸಾಕ್ಷಾತ್ ಶೇಷದಾಸರು ನಿಂತಿರುವದು

ಕಂಡು ಬಂದಿತು. "ಮಾಮಾ" ಎಂಬ ಮಾತು ಹೋರ ಹೋಮ್ಮುತಿರುವಾಗಲೆ ಕಣ್ತುಂಬ ಆನಂದ ಭಾಷ್ಪಗಳುದಿರಿದವು.

ಊರಿಗೆ ಮರಳಿದ ಮೇಲೆ ದಾಸರನ್ನು ಕುರಿತು " ನೀವು ಇಲ್ಲೆ ಇರುವುದಾಗಿ ಹೇಳಿದಿರಿ. ಆದರೆ ನೀವೂ ಬಂದಿದ್ದಿರಲ್ಲಾ! ನಾನು ಬೃಂದಾವನ ಹತ್ತಿರ ನಿಮ್ಮನ್ನು ಕಂಡೆ." ಅಂದ ಕೂಡಲೇ ದಾಸರಿಗೆ ತಮ್ಮ ಅಂಶ ಬಹಿರ್ಗತವಾದಂತಾಯಿತು.

ಈ ವಿಧವಾಗಿ ತಾವೇ ಟೀಕಾಕೃತ್ಪಾದರೆಂದು ಪೂರ್ಯದಲ್ಲಿ ಜಯತೀರ್ಥರ ಚರಿತ್ರೆಯಲ್ಲಿ ಹೇಳಲಾಯಿತು. ಇದಲ್ಲದೆ ಅನೇಕಾನೇಕವಾದ ಪವಾಡಗಳನ್ನು ಪ್ರಕಟ ಪಡಿಸಿರುವರು. ಕಲ್ಲೂರಲ್ಲಿ ದಾಸವರ್ಯರ ಭೂಮಿಗಳು (ಹೊಲಗಳು) ಇದ್ದ ಪ್ರಯುಕ್ತ ಅವುಗಳನ್ನು ನೋಡಿ ಕೊಳ್ಳುವ ಜವಾಬ್ದಾರಿ ಕೃಷ್ಣಪ್ಪನವರಿಗೆ ವಹಿಸಿದ್ದರು. ಕಲ್ಲೂರು ಕೃಷ್ಣಪ್ಪನವರಿಗೆ ದಾಸರ ಮೇಲೆ ಅಮಿತ ಭಕ್ತಿ ಪ್ರೇಮಗಳಿದ್ದವು. ಆಗಾಗ ದಾಸರು ಪತ್ರಗಳ ಮೂಲಕ ತಮ್ಮ ಹೊಲಗಳ ಬಗ್ಗೆ ತಿಳಿದುಕೊಳ್ಳುತ್ತಿದ್ದರು. ಕೃಷ್ಣಪ್ಪನವರ ಮೇಲೆ ಪ್ರೇಮ ವಿಶ್ವಾಸ ಬಹಳವಿದ್ದಿತು. ಕಲ್ಲೂರು. ಕೃಷ್ಣಪ್ಪನವರಿಗೆ ಬರೆದ ಪತ್ರಗಳು (320) ಈಗ ಲಭ್ಯವಾಗಿವೆ. ಅವರ ವಂಶಜರು ಅವುಗಳನ್ನು ಭದ್ರವಾಗಿಟ್ಟಿರುವರು. ಕೃಷ್ಣಪ್ಪನವರು ಕಲ್ಲೂರಿಗೆ ಶಾನುಭೋಗರಾಗಿ ಇದ್ದರು .

ಒಮ್ಮೆ ಕೃಷ್ಣಪ್ಪನವರು ಬೀಳಾಗಿ ಬಿದ್ದಿರುವ ಭೂಮಿಯನ್ನು ಬ್ರಾಹ್ಮಣರ ಹೆಸರಿನಲ್ಲಿ ಪಟ್ಟಾ ಮಾಡಿಸಿದ್ದರು. ಕುಲಕರಣಿಗೆ ಆಗದ ಕೆಲವರು ಹೈದ್ರಾಬಾದು ನವಾಬರಿಗೆ ಚಾಡಿ ಹೇಳಿದ ಪ್ರಯುಕ್ತ ನವಾಬರು ಕೃಷ್ಣಪ್ಪನವರನ್ನು ತೋಪಿಗೆ ಕಟ್ಟಿ ಹತ ಮಾಡಬೇಕೆಂದು ಹಕುಂ ನಾಮಾಕಳಿಸಿದರು. ಕೆಲವೇ ದಿನಗಳಲ್ಲಿ ರಾಜಭಟರು ಬಂದು ಕೃಷ್ಣಪ್ಪನನ್ನು ಬಂಧಿಸಿ ಹೈದರಾಬಾದಿಗೆ ಹಿಡಿದೊಯ್ಯುವ ವಾರ್ತೆ ತಿಳಿದ ಕೃಷ್ಣಪ್ಪ ದಾಸರ ದರ್ಶನಕ್ಕಾಗಿ ಮೊದಲು ಕಲ್ಲಿಗೆ ಬಂದನು. ದಾಸರನ್ನು ದರ್ಶನ ಮಾಡಿಕೊಂಡು ತಮಗೆ ಬಂದ ವಿಪತ್ತನ್ನು ಹೇಳಿಕೊಂಡನು. ಆ ವಾರ್ತೆ ಕೇಳಿದ ದಾಸರು ಕ್ಷೇತ್ರದ ಶ್ರೀನಿವಾಸನನ್ನು ಪ್ರಾರ್ಥಿಸಿ, ಕೃಷ್ಣಪ್ಪನವರಿಗೆ ಮಂತ್ರಾಕ್ಷತೆ ಕೊಟ್ಟು "ಇವು ಸದಾ ನಿಮ್ಮ ತಲೆಯ ರುಮಾಲಿನಲ್ಲಿ ಕಟ್ಟಿ ಇಡರಿ, ನಿಮ್ಮನ್ನು ರಕ್ಷಿಸುವ ಭಾರ ಶ್ರೀನಿವಾಸನಿಗೆ ಹತ್ತಿರುವದು ನೀವು ನಿಶ್ಚಿಂತರಾಗಿರಿ." ಎಂದು ಹೇಳಿ ಕಳುಹಿಸಿದರು.

ಕೃಷ್ಣಪ್ಪ ಕಲ್ಲೂರಿಗೆ ಸೇರಿದ ಮರುದಿನವೇ ರಾಜ ಭಟರು ಹೈದ್ರಾಬಾದನಿಂದ ಕಲ್ಲೂರಿಗೆ ಬಂದರು. ಕೃಷ್ಣಪ್ಪನನ್ನು ಕಂಡು "ನವಾಬರ ಅಪ್ಪಣೆಯಾಗಿದೆ, ನಿಮ್ಮನ್ನು ನಾವು ಬಂದಿಸುವೆವು" ಎಂದು ನುಡಿದರು. ಆ ಭಟರ ಮಾತಿಗೆ ಕೃಷ್ಣಪ್ಪನು ನಾನು ನಿಮ್ಮಿಂದ ಬರಲು ಸಿದ್ಧವಾಗಿರುವಾಗ ಬಂಧಿಸುವ ದೇತಕ್ಕೆ ನಡೆಯಿರಿ ನಾನು ನಿಮ್ಮ ಸಂಗಡವೇ ಬರುತ್ತೇನೆ" ಎಂದು ನುಡಿದು ಭಟರ ಹಿಂದೆ ನಡೆದರು. ಮೂರು ನಾಲ್ಕು ದಿನಗಳಿಗೆ ಹೈದ್ರಾಬಾದಿಗೆ ತಲುಪಿ ನವಾಬನನ್ನು ಕೃಷ್ಣಪ್ಪನವರು ಭೇಟಿ ಯಾದರು. ನವಾಬನು ಕೃಷ್ಣಪ್ಪನನ್ನು ಕಂಡು ಕುಪಿತನಾಗಿ ಅಂದೇ ತೋಪಿಗೆ ಕಟ್ಟಲು ಆಜ್ಞಾಪಿಸಿದರು. ತಕ್ಷಣವೇ ಭಟರು ಕೃಷ್ಣಪ್ಪನನ್ನು ತೋಪಿನ ಬಾಯಿಗೆ ಕಟ್ಟಿದರು. ತೋಪಿಗೆ

ಬೆಂಕಿ ಹಚ್ಚಿದರು. ಆದರೆ ತೋಪಿನಲ್ಲಿ ತುಂಬಿರುವ ಮದ್ದು ಗುಂಡು ಬೆಂಕಿಗೆ ಹಾರದೆ ಬೆಂಕಿ ಆರಿಹೋಯಿತು. ಈ ರೀತಿಯಾಗಿ ಮೂರು ಸಲ ಬೆಂಕಿ ಹಚ್ಚಿದರೂ ಆರಿ ಹೋಯಿತು. ಕೃಷ್ಣಪ್ಪನು ದಾಸರು ಕೊಟ್ಟ ಮಂತ್ರಾಕ್ಷತೆಯನ್ನು ತನ್ನ ಶಿರದಲ್ಲಿದ್ದ ರುಮಾಲಿನಲ್ಲಿ ಕಟ್ಟಿ ಇಟ್ಟಿದ್ದನು.

ಈ ದೃಶ್ಯ ಕಂಡ ನವಾಬನು ಗಾಬರಿ ಗೊಂಡು "ಈತನಾರೋ ಮಹಾಪುರುಷನಾಗಿರಬೇಕು. ಈತನನ್ನು ಬಿಟ್ಟು ಮರ್ಯಾದೆ ಮಾಡಿ ಕಳುಹಿಸಿಬಿಡಿ" ಎಂದು ಆಜ್ಞಾಪಿಸಿದನು. ಕೃಷ್ಣಪ್ಪನು ದಾಸರು ಅನುಗ್ರಹ ಮಾಡಿ ಕೊಟ್ಟ ಮಂತ್ರಾಕ್ಷತೆಯ ಮಹಿಮೆಯನ್ನು ನೆನಸಿ, ಶ್ರೀನಿವಾಸನನ್ನು ಮತ್ತು ದಾಸವರ್ಯರನ್ನು ಅನೇಕವಾಗಿ ಪ್ರಾರ್ಥಿಸಿದನು. ಹೈದರಾಬಾದ ನಗರದಿಂದ ನೆಟ್ಟಗೆ ಆದಿಶಿಲಾ ಕ್ಷೇತ್ರಕ್ಕೆ ಶ್ರೀನಿವಾಸನ ದರ್ಶನ ಮತ್ತು ಗುರುಗಳಾದ ಶೇಷದಾಸರ ದರ್ಶನಕ್ಕಾಗಿ ಬಂದನು. ದೇವರ ದರ್ಶನ ಮಾಡಿಕೊಂಡು ದಾಸರಿದ್ದ ಛತ್ರಕ್ಕೆ ಹೋಗಿ ದಾಸರನ್ನು ಕಂಡು ಪಾದಮುಟ್ಟಿ ನಮಸ್ಕರಿಸಿ, ನಡೆದ ವೃತ್ತಾಂತವನ್ನು ವಿಸ್ತಾರವಾಗಿ ತಿಳಿಸಿದನು. ಎರಡು ದಿನ ಸನ್ನಿಧಾನದಲ್ಲಿದ್ದು, ಪುನಃ ಕಲ್ಲೂರಿಗೆ ಪ್ರಯಾಣ ಬೆಳೆಸಿದನು. ಕೃಷ್ಣಪ್ಪನು ಸುರಕ್ಷಿತವಾಗಿ ಊರಿಗೆ ಬಂದುದನ್ನು ಕಂಡು ಮನೆಯವರು ಮತ್ತು ಗ್ರಾಮದವರು ಬಹಳ ಸಂತೋಷದಿಂದ ಎದುರುಗೊಂಡು ಗ್ರಾಮದೊಳಗೆ ಪ್ರವೇಶ ಮಾಡಿಸಿದರು. ಕುಬುದ್ಧಿಯಿಂದ ಚಾಡಿ ಹೇಳಿದವರು ಕುಲಕರಣಿ ಮುಂದೆ ಬಂದು ಪಾದಕ್ಕೆ ಬಿದ್ದು ತಾವು ಮಾಡಿದ ಅಪರಾದ ಕ್ಷಮಿಸಬೇಕೆಂದು ಬಹುವಿಧವಾಗಿ ಪಾರ್ಥಿಸಿ ಕೊಂಡರು.

ಅಂಶ ಪ್ರಾಬಲ್ಯದಿಂದ ಅರವತ್ತನೇಯ ವಯಸ್ಸಿಗೆ ಹದಿ ಹೆಣ್ಣಿಗೆ ನವಯುವಕನಾಗಿ ಕಂಡು ಮತ್ತೊಂದು (ಎರಡನೇ ಮದುವೆ) ಮದುವೆಯಾದರೂ ಪರಮಾತ್ಮನ ಚಿಂತನೆಗೆ ಚ್ಯುತಿ ಬರಲಿಲ್ಲ. ಒಮ್ಮೆ ರಾಯಚೂರು ಜಿಲ್ಲೆಯ ಮಾನ್ವಿ ತಾಲ್ಲೂಕಿನ ಕಲ್ಲೂರು ಗ್ರಾಮದಲ್ಲಿ ಛಲದ ಬಲ ಪಡೆದ ಬಂಧುವಿನ ಮನೆಯಲ್ಲಿ ಅನಿವಾರ್ಯವಾಗಿ ಆಹಾರ ಸ್ವೀಕರಿಸಿದರು. ಕೂಡಲೇ ವಮನವಾಯಿತು. ವಮನವಾದದ್ದು ಕೇವಲ ಸ್ವೀಕರಿಸಿದ ಆಹಾರ ಮಾತ್ರವಲ್ಲ ಇದಿವರೆಗೂ ಅವರು ಪಡೆದ ಜ್ಞಾನ ಅಪರೋಕ್ಷ ಜ್ಞಾನ ಎಲ್ಲವು ಅದರಿಂದ ಹೊರಬಂದಿತು. ಅಪರೋಕ್ಷ ತಿರೋಧಾನದಿಂದ ಹೃದಯಸ್ಥ ಬಿಂಬನಾದ ಶ್ರೀಹರಿ ಅಗೋಚರನಾದ ಅವರ ಅಂತರಾತ್ಮ ಅಂತು ಪರದೆ ಎಳೆದ ರಂಗಸ್ಥಳವಾಯಿತು. ದಾಸರು ಆರ್ತರಾಗಿ ಮೊದಲು ಕಲ್ಲಿಗೆ ಬಂದರು. ಅಲ್ಲಿಗೆ ಒಂದು ಮೈಲು ದೂರದಲ್ಲಿರುವ ಬೆಟ್ಟದ ಮೇಲೇರಿ ಶ್ರೀಹರಿಯನ್ನು ಪರಿಪರಿ ವಿಧದಿಂದ ಧ್ಯಾನಿಸಿದರು.

"ಇಷ್ಟು ನಿರ್ದಯ ನ್ಯಾಕೊ ಎಲೆ ಎಲೆ ಆಪ್ತನಾದ |
ಕೃಷ್ಣಾ ನಿನಗೆ ನಾನು ದೂರನಾದವನೆ | "

ಎಂದೆನುತ, ಆಕ್ರಂದಿಸಿ, ಒಂದೆರಡು ಉತ್ತತ್ತಿ ಸೇವಿಸಿ ಕಠಿಣವಾದ ತಪವಂಗೈದರು. ಬಹು ಬಗೆಯಿಂದ ಸ್ತೋತ್ರ ಮಾಡಿ, ತಿರೋಧಾನವಾದ ಅಪರೋಕ್ಷವನ್ನು ಪುನಃ ಪಡೆದರು.

" ಮಾಯ ಗಾರನೆ ನಿನ್ನ ಮಾಯ ತಿಳಿಯುವದಕ್ಕೆ |
ಕಾಯ ಜಾದ್ಯಾದಿ ಸುರರು ಸಮರ್ಥರೆ | "

ಎಂದು ಹಾಡಿ ಹೊಗಳಿ

" ನಿನ್ನ ಕರುಣದಿಂದ ಧನ್ಯಾನಾನೆಲ್ಲೆದೈವ" ಎಂದು ಕೊಂಡಾಡಿದ್ದಾರೆ.

ಶ್ರೀ ಶೇಷದಾಸರ ಮಹಿಮೆ ಅನಂತ ಅಪಾರ ಕೇವಲ ಒಂದೆರಡು ಶಬ್ಧಗಳಿಂದ, ನಾಲ್ಕೆಂಟು ವಾಕ್ಯಗಳಿಂದ ಹೇಳುವದಾಗಲಿ, ಹತ್ತೆಂಟು ಪುಟದಲ್ಲಿ ಸೀಮಿತಗೊಳಿಸುವದಾಗಲಿ ಅಸಾಧ್ಯವಾದ ಮಾತು. "ಕರಿಯನ್ನು ಕನ್ನಡಿಯಲ್ಲಿ ಕಾಣುವಂತೆ" ಅವರ ಜೀವನದ ಅತಿ ಸಂಕ್ಷಿಪ್ತ ರೂಪವೇ ಈ ಗ್ರಂಥ.

ಶೇಷದಾಸರು ತಾವು ಇಂದ್ರಾಂಶರಾದ ಪಾರ್ಥರೆಂದು ಶ್ರೀಹರಿಯಲ್ಲಿ ಮೊರೆಯಿಟ್ಟುದ್ದು ಅವರ ಸುಳಾದಿಗಳ ಮೂಲಕ ಗೊತ್ತಾಗುತ್ತದೆ.

ಹೀಗೆ ದಾಸವರೇಣ್ಯರು ಸಜ್ಜನರ ಸೇವೆಗಾಗಿ ಪಾರ್ಥಿವ ನಾಮಸಂ|| ರ ಚೈತ್ರ ಶುದ್ಧ ಪ್ರತಿಪದದಂದು ಧರೂರು ಗ್ರಾಮದಲ್ಲಿ ತಮ್ಮ ಸ್ವಗೃಹದ ಮುಂದಿನ ಪ್ರಾಂಗಣದಲ್ಲಿ ತಮ್ಮ ಉಪಾಸ್ಯ ದೇವತೆಯಾದ "ಶ್ರೀಪಾರ್ಥಸಾರಥಿಯ" ಮೂರುತಿಯನ್ನು ಪ್ರತಿಷ್ಠಾಪನೆ ಮಾಡಿದರು. ಅಂದು ಶಾಲಿವಾಹನ ಶಕೆ 1807 ಕ್ರೀ ಸ್ತು ಶಕೆ 1885ನೇ ವರ್ಷ

ಪುನಃ ಮೊದಲು ಕಲ್ಲಿಗೆ ಬಂದರು. ಶ್ರೀ ಲಕ್ಷ್ಮಿವೆಂಕಟೇಶನ ಸನ್ನಿಧಿಯಲ್ಲಿ ಗಂಗೆಯನ್ನು ಹರಿಸಿದರು. ನೂರಾರು ಜನರು ಗಂಗೆಯಲ್ಲಿ ಮಿಂದು ಪಾವನರಾದರು. ಇಂದಿಗೂ ಆ ಗಂಗೆಯನ್ನು ತುಂಬಿಟ್ಟ ಹಿತ್ತಾಳೆ ಹೂಜಿಯನ್ನು ಧರೂರಿನ ಪಾರ್ಥಸಾರಥಿಯ ಗುಡಿಯಲ್ಲಿ ಕಾಣಬಹುದು. ಆದರೆ ನೂರಾ ಹದಿನಾಲ್ಕು ವರ್ಷಗಳಾ ನಂತರ ನೀರು ಇರಲು ಹೇಗೆ ಸಾಧ್ಯ ಇಂದು ನೀರಿಲ್ಲ.

ಶ್ರೀ ಶೇಷದಾಸರು ಶಾಲಿವಾಹನ ಶಕೆ 1807 ಪಾರ್ಥಿವನಾಮ ಸಂ|| ರ ವೈಶಾಖ ಶುದ್ಧ ಅಷ್ಟಮಿ ದಿನ (ಕ್ರಿ.ಶ. 1885) ಮೊದಲು ಕಲ್ಲು ಕ್ಷೇತ್ರದಲ್ಲಿ ಶ್ರೀಹರಿಯ ಪಾದ ಸನ್ನಿಧಿಯನ್ನು ಸೇರಿದರು.

ಶ್ರೀ ಮೊದಲು ಕಲ್ಲು ಕ್ಷೇತ್ರದಲ್ಲಿರುವ ಶ್ರೀನಿವಾಸನ ದೇವಾಲಯದ ದಕ್ಷಿಣ ಭಾಗದಲ್ಲಿ ದಾಸರ ಕಟ್ಟೆ ಇರುವದು. ಭಕ್ತಾದಿಗಳು ಮೊದಲು ಕಲ್ಲು ಕ್ಷೇತ್ರಕ್ಕೆ ಬಂದು ಶ್ರೀದಾಸರ ದರ್ಶನವನ್ನು ತಪ್ಪದೆ ಮಾಡುತ್ತಾರೆ. ದಾಸವರ್ಯರ ವಂಶಜರೇ ಛತ್ರದಲ್ಲಿದ್ದು ಅತಿಥಿ, ಅಭ್ಯಾಗತರಿಗೆ ತೀರ್ಥ ಪ್ರಸಾದವನ್ನು ಕೊಡುತ್ತಾರೆ. ಶ್ರೀದಾಸರಾಯರ ಆರಾದನೆಯನ್ನು ಈ ಕ್ಷೇತ್ರದಲ್ಲಿ ಇವರೇ ಅತಿ ವಿಜೃಂಭಣೆಯಿಂದ ಮಾಡುತ್ತಾರೆ.

ಈ ಕ್ಷೇತ್ರದಲ್ಲಿ ದಾಸರ ಕಟ್ಟೆಯನ್ನು ಅಪ್ಪ ಅವರ ಕಟ್ಟೆ ಎಂದು, ಆರಾಧನೆಯನ್ನು ಅಪ್ಪ ಅವರ ಆರಾಧನೆಯೆಂದು ಕರೆಯುತ್ತಾರೆ. ಗದ್ವಾಲಿ, ಮತ್ತು ಸುತ್ತಮುತ್ತ ಇರುವ ಗ್ರಾಮಗಳ ಬ್ರಾಹ್ಮಣರು ಪ್ರತಿ ವರ್ಷ ಈ ಕ್ಷೇತ್ರಕ್ಕೆ ಬರುತ್ತಾರೆ. ದಾಸರನ್ನು "**ಮೊದಲು ಕಲ್ಲು ದಾಸ**"ರೆಂದು, "**ಧರೂರು ದಾಸ** "ರೆಂದು ಮತ್ತು "**ಚಿಂತರ ವೇಲಿದಾಸ** " ರೆಂದು ಕರೆಯುವದು ವಾಡಿಕೆಯಾಗಿದೆ.

ದಾಸ ವರೇಣ್ಯರು ತಾವು ಅರ್ಜುನನಾಗಿದ್ದು, ಈಗ ಈ ಮಾನವ ಜನ್ಮಕ್ಕೆ ಬಂದುದಕ್ಕೆ ಶ್ರೀಕೃಷ್ಣನನ್ನು ಕುರಿತು ಯಾಕೆ ಈಜನ್ಮ ಕೊಟ್ಟೆ ತಂದೆ. ನಾನೇನು ಅಪರಾಧ ಮಾಡಿದ್ದೆ ಎಂಬ ಪ್ರಾರ್ಥನೆಯ ಸುಳಾದಿಗಳನ್ನು ರಚಿಸಿರುವರು. ಇಲ್ಲಿ ಮಾದರಿಗಾಗಿ ಎರಡು ಸುಳಾದಿಗಳನ್ನು ಕೊಡಲಾಗಿದೆ. ಬಂಧುಗಳಾದ ಕಲ್ಲೂರು ಕೃಷ್ಣಪ್ಪನವರು ಮೊದಲು ಕಲ್ಲಿಗೆ ಧಾವಿಸಿ ಬಂದರು. ದಾಸರ ಬೂದಿ ಆಸ್ತಿ ಮಾತ್ರ ಕಂಡರು. ಒಮ್ಮೆ ಕಲ್ಲೂರಿನಲ್ಲಿದ್ದಾಗ ಸದಾ ತಮ್ಮಲ್ಲಿಯೇ ಇರುವುದಾಗಿ ಹೇಳಿರುವುದರಿಂದ ಅವರು ಮಾನವ ರೂಪದಿಂದ ಮರೆಯಾದರೂ ಅವರ ಆಸ್ತಿಯಾದರೂ ಇರಲೆಂದು ಅಲ್ಲಿಂದ ಕಲ್ಲೂರಿಗೆ ತೆಗೆದು ಕೊಂಡು ಹೋದರು. ನಂದಾ ದೀಪವನ್ನು ಹೊತ್ತಿಸಿದರು. ಇಂದಿನವರೆಗೂ ಕಲ್ಲೂರಿನಲ್ಲಿ ಆ ಮನೆತನದಲ್ಲಿ ದಾಸರ ಅಸ್ತಿಗಳಿವೆ. ದಾಸರ ಆರಾಧನೆಗಾಗಿ ಸಂಸ್ಥಾನದಿಂದ ಒಂದು ತೇರು ಕೊಡುಗೆಯಾಗಿತ್ತು. ಇತ್ತೀಚಿಗೆ ಭಕ್ತರು ಅವರ ಬೆಳ್ಳಿಯ ಮೂರ್ತಿಯನ್ನು ಮಾಡಿಸುವದಲ್ಲದೆ ಹೊಸದೊಂದು ರಥವನ್ನು ಮಾಡಿದ್ದಾರೆ.

ಮಹಾ ಮಹಿಮರಾದ ಶ್ರೀ ಶೇಷದಾಸರು ತಪವನ್ನು ಮಾಡಿ, ಅಪರೋಕ್ಷವನ್ನು ಪಡೆದು, ಪವಿತ್ರ ತೀರ್ಥ ಕ್ಷೇತ್ರವಾದ ಚಿಂತರವೇಲಿ ಪ್ರಾಣದೇವರು ಉಗ್ರವಾಗಿದ್ದುದರಿಂದ ದಾಸರು ಒಂದು ಯಂತ್ರವನ್ನು ಬರೆದಿಟ್ಟು ಶಾಂತ ಮೂರ್ತಿಯನ್ನಾಗಿ ಮಾಡಿದ್ದಾರೆ. ಸಪ್ತಗ್ರಾಮಗಳಿಗಧಿಪತಿಯಾಗಿ ಸಹಸ್ರಾರು ಸಂಖ್ಯೆಯಿಂದ ಸೇವಿಸಿಕೊಳ್ಳುತ್ತಾ ಬೇಡಿದವರ ಇಷ್ಟಾರ್ಥ ಈಡೇರಿಸುತ್ತಾ ಜಾಗೃತ ಮೂರ್ತಿಯಾಗಿ ನೆಲಸಿದ್ದಾನೆ ಚಿಂತರವೇಲಿ ಮಾರುತಿರಾಯ.

ಇಂತಹ ಪ್ರಾಣ ದೇವರ ದರ್ಶನದಿಂದ ಪ್ರತಿಯೊಬ್ಬ ಜೀವಿಯು ಜೀವನ ಪಾವನವಾಗುವದರಲ್ಲಿ ಸಂದೇಹವಿಲ್ಲ ಆದರೆ ಆವ್ಯಕ್ತಿಯ ಆದರದ ಭಕ್ತಿಯ ಮೇಲೆ ಫಲಾಫಲಗಳು ನೆರವೇರುತ್ತವೆ.

**ಶ್ರೀ ಶಾಂಘ್ರಿಸೇವಕಂ ನಿತ್ಯಂ ಭೂಸರಾಗ್ರಕುಲೋದ್ಭವಂ |**
**ವಾಸಮಾದಿ ಶಿಲಾ ಕ್ಷೇತ್ರಂ ಶೇಷಾದಾಸ ಗುರುಂ ಭಜೇ ||**

**|| ಶ್ರೀ ಕೃಷ್ಣಾರ್ಪಣಮಸ್ತು ||**

N.B. ಈ ಗ್ರಂಥದ ಕೊನೆಯಲ್ಲಿ ದಾಸರು ರಚಿಸಿರುವ ಎರಡು ಸುಳಾದಿಗಳನ್ನು ಮತ್ತು ಅವರ ಅಕ್ಷರವನ್ನೂ ಕೊಡಲಾಗಿದೆ (ಶ್ರೀ ಶ್ರೀ ರಘುದಾಂತ ತೀರ್ಥ ವಿರಜಿತ)

ಸುಳಾದಿ - 1

ಶ್ರೀ

## ಧ್ರುವ ತಾಳ

ತತ್ರ ಶ್ರೀ ವಿಜಯೋಭೂರ್ತಿ ಎಂದ ಕಾರಣದಿಂದ |
ಶ್ರುತ್ಯಾಭಿಮಾನ್ಯರಾದ ಸುರರ ತತಿಯ |
ಚಿತ್ತಕ್ಕೆ ನಿಲುಕದ ಅಗಣಿತ ಮಹಿಮ ಎನ್ನ |
ಹತ್ತಿಲಿ ಬಿಡದಿಪ್ಪ ಕಾರಣದಿಂದ |
ಭಕ್ತರಗ್ರೇಸರನ ಉಕ್ತಿಯ ತೆರದಂತೆ |
ಉತ್ತಮವಾದ ಭೂತಿ ಐದಿದೆನೊ |
ಈತೆರವಾದದ್ದು ನಿನ್ನಿಂದಲ್ಲದೆ ಎನ್ನ
ಕೃತ್ಯವಲ್ಲವಯ್ಯಾ ನಿನ್ನ ಸಾಕ್ಷಿ |
ಶುಕ್ತಿಯಲಿ ರಜತ ಭ್ರಾಂತಿಯು ತೋರಿದಂತೆ |
ಉಕ್ತವಾದ ಪಠಣದಿಂದ |
ಸ್ವಾತಂತ್ರದಿಂದ ಎನಗೆ ಭೂತಿಯು ತೊರುತಿದೆ |
ಮರ್ತ್ಯರಾದವರ ಕಂಗಳಿಗೆ |
ಸತ್ವ ಪ್ರಾಚುರ್ಯವಾದ ಪೂರ್ಣ ಪ್ರಜ್ಞರಮತ |
ವರ್ತಿಗಳಾದವರು ಒಪ್ಪಿರಿದನು |
ಮಿತ್ರನಿಂದಲ್ಲಿ ಸಹಿತನಾದ ಪಾರ್ಥನಲ್ಲಿ |
' ಅತ್ರ ' ವಿಭೂತಿ ಉಂಟು ಧೃಡವಾಗಿ |
ಪತ್ಯಭಿಯುಕ್ತಳಾದ ಸತಿಯೇವೆ ಮಂಗಳ |
ಯುಕ್ತಳೆನಿಸಿಕೊಂಬ ಸೊಬಗಿನಂತೆ |
ನಿತ್ಯ ಮುಕ್ತಳಾದ ಲಕುಮಿ ಬೊಮ್ಮಾದ್ಯರೆಲ್ಲ |
ಚಿತ್ತಜಪಿತ ನಿನ್ನ ಸಹಿತವಾಗಿ |
ಉತ್ತಮವಾದ ಭೂತಿ ಐದಿ ಸುಖಿಸುವರು |
ವ್ಯತ್ಯಸ್ಥ ಇದಕಿಲ್ಲ ಎಂದೆಂದಿಗೆ |
ಈ ತೆರ ವಾಗದಿರೆ ಪಾರ್ಥನಿಂದಲೆ ಭೂತಿ |
ಸತ್ಯವೆಂದರಿತರೆ ಕಾರ್ಯದಿಂದ
ಪ್ರತ್ಯಕ್ಷವಾಗುವದು ಘಟಣ ಕೃತ್ಯಗಳಿಂದ ಈ |
ಗಾತ್ರವೆ ಇದಕೆ ಸಾಕ್ಷಿ ಪೇಳಲೇನು |
ಮುಕ್ತರಾಶ್ರಯ ಗುರು ವಿಜಯ ವಿಠ್ಠಲ ನಿನ್ನ |
ಅತ್ಯಧಿಕ ಪ್ರಿತಿಯೋ ಭೂತಿ ಎನಗೆ | ||೧||

- ಮಟ್ಟ ತಾಳ -

ನೂರು ಸಾಸಿರ ಸಂಖ್ಯ ಪರಿಮಿತಿವಾಗಿದ್ದ |
ಘೋರ ಭಯಂಕರದಾ ಧನು ಕೈಯಲಿ ಪಿಡಿದು |
ಚಾರು ವಿಲಾಸದಲ್ಲಿ ವ್ಯವಧಾನವ ಕೊಡದೆ |
ಕ್ರೂರ ಶತ್ರುಗಳನ್ನು ಯಡಬಲದಿ ಯೆಚಿವ |
ಧೀರನೆನಿಸಿ ನಾಮಾ ವರವಂತೆ ಪಡೆದು |
ಕರದಲ್ಲಿ ಈಗ ತೃಣ ಚಲಿಸುವ ಶಕ್ತ ನಾಹದಿದ್ದವನಾದೆ |
ಧಾರುಣಿಯಲ್ಲಿ ಮಾನ್ಯನೆನಿಸಿ ಮೆರೆವನಾಗಿ |
ನರಾಧಮರಿಂದ ಬಲು ನಿಂದಿತನಾದೆ |
ವಾರಿಜಾಕ್ಷ ಗುರು ವಿಜಯ ವಿಠ್ಠಲರೇಯಾ |
ದೂರ ನೋಳ್ಪದರಿಂದ ಇನಿತಾಯಿತು ಎನಗೆ | ||೧||

- ತ್ರಿವಿಡಿ ತಾಳ -

ವಿಜಯನಾಮವ ಪಡೆದು ಈಕುಂಭಿಣಿಯ ಮಧ್ಯ |
ಅಜಯ ವುಳ್ಳವನಾದೆ ಅಲ್ಪರೊಡನೆ |
ದ್ವಿಜವರೂಥಿಯ ಪಾದ ಭಕುತನೆನಿಸಿ ಈಗ |
ನಿಜ ಭಕ್ತರಿಗೆ ದೂರನಾದೆ ನಿಂದು |
ಕುಜನ ಮರ್ದನ ಗುರು ವಿಜಯ ವಿಠ್ಠಲನೆಂಬ |
ವಿಜಯ ಎನ್ನಗಲಿದ ಕೃತ್ಯದಿಂದ | ||೩||

- ಅಟ್ಟ ತಾಳ -

ಹತ್ತುನಾಮಗಳು ಧಾರಿತ್ರಿಯೊಳಗೆ ಪಡದು |
ಸಾರ್ಥಕನೆನಿಸಿ ಇತ್ತಲೀಗಲು ಅದಕೆ |
ನಿರರ್ಥಕನಾನಾದೆ ಬಲುವಿಧದಿಂದಲ್ಲಿ |
ಶಕ್ತನಾದ ನಿನ್ನ ಯುಕ್ತನಾಗದಿರೆ |
ವ್ಯರ್ಥವಾಗುವವು ಶಕ್ತ್ಯಾದಿಗಳು |
ಭಕ್ತವತ್ಸಲ ಗುರು ವಿಜ್ಯ ವಿಠ್ಠಲ ಎನ್ನ |
ಹತ್ತೀಲಿ ನೀನಿಂದು ಕೃತಕೃತ್ಯ ನೆನಿಪದು |
ಭಕ್ತವತ್ಸಲ ಗುರು ವಿಜಯ ವಿಠ್ಠಲ ಎನ್ನ |
ಹತ್ತೀಲಿ ನೀನಿಂದು ಕೃತಕೃತ್ಯ ನೆನಿಪದು | ||೪||

## ಆ ದಿ ತಾ ಳ

ಕೊಟ್ಟಿದ್ದ ಭಾಷೆಯನ್ನು ಸತ್ಯವ ಮಾಳ್ಪನಾಗಿ |
ಕೃಷ್ಣರಾಯ ಎನ್ನ ತೊಲಗದ ಕಾರಣದಿ |
ಸೃಷ್ಟಿಯೊಳಗೆ ನಾನು ಬಲು ಧನ್ಯ ನೆನಿಸಿದೆ |
ಸೃಷ್ಟೇಷ್ಟದನೆ ನೀನು ಬಿಟ್ಟು ನೋಡುವಕಾಲ ನಿ |
ಕೃಷ್ಟದೊಳಗತಿ ನಿಕೃಷ್ಟನಾದೆ ಬಲು |
ಅಷ್ಟಮ ಗರ್ಭಜಾತ ಗುರು ವಿಜಯ ವಿಠ್ಠಲನ್ನ |
ದೃಷ್ಟಿಯೆ ಎನಗತಿ ಶುಭವಯ್ಯಾ ಆವಾವಕಾಲಾ | || ೫ ||

## ಜ ತೆ

ನಿನ್ನ ಕರುಣದಿಂದ ಧನ್ಯನಾನೆಲೊ ದೇವ |
ಪನ್ನಂಗಚಲವಾಸ ಗುರು ವಿಜಯ ವಿಠ್ಠಲರೇಯಾ |

|| ೬ ||

*ಶ್ರೀ ಮಧ್ವೇಶಾರ್ಪಿತವು*

ಶ್ರೀ

ಸುಳಾದಿ - 2

## ಧ್ರುವತಾಳ

" ತಸ್ಮಾತ್ ತ್ವಮುತ್ತಿಷ್ಟ ಯಶೋಲಭಸ್ವ |
ಜಿತ್ವಾ ಶತ್ರೂನ್ ಭುಂಕ್ಷ್ವ ರಾಜ್ಯಂ ಸಮೃುದ್ಧಂ |
ಮಯ್ಯೈ ವೈತೇ ನಿಹತಾಃ ಪೂರ್ವ ಮೇವ |
ನಿಮಿತ್ತ ಮಾತ್ರಂ ಭವ ಸವ್ಯ ಸಾಚಿನ್ |

( ಅ. 11, ಶ್ಲೊ 33)

ಎನ್ನಿಂದ ಆದ ಕೃತ್ಯ ಅವಜ್ಞ ಮಾಡದಲೆ |
ಉತ್ತರವ ಪೇಳುವದು |
ಭಾವಾಭಿಜನ್ಯವಾದ ಅಹಂಕಾರ ವಾದರೂ |
ಶ್ರೀವರ ನಿನ್ನಿಂದೇ ಪುಟ್ಟಿತೆನಗೆ |
ಪಾವನ ಮಹಿಮ ಗುರು ವಿಜಯ ವಿಠ್ಠಲರೇಯ |
ಆವಪರಾಧ ಉಂಟು ತಿಳಿಸಿ ಪೇಳೊ || || ೧ ||

## ಮ ಟ್ಟ ತಾ ಳ

" ದ್ರೋಣಂಚ ಭೀಷ್ಮಂಚ ಜಯದ್ರಥಂಚ |
ಕರ್ಣಂ ತಥಾನ್ಯಾನಪಿ ಯೋಧ ವೀರಾನ್ |
ಮಯಾ ಹತಾಂ ಸ್ತ್ವಂ ಜಹಿ ಮಾವ್ಯಥಿಷ್ಠಾಃ |
ಯುದ್ಧ್ಯಸ್ವಜೇತಾಸಿ ರಣೇ ಸಪತ್ನಾನ್ " | ಅ 11 ಶ್ಲೋ 34
ಪ್ರಾಣನಾಥನೆ ಗುರು ವಿಜಯ ವಿಠ್ಠಲರೇಯಾ |
ಎನಗಾವದು ಕೃತ್ಯ ಇದರೊಳಗೆ | || ೨ ||

## ತ್ರಿ ವಿ ಡಿ ತಾ ಳ

ವೀರನಾದವ ಒಂದು ಕರಗಸ ಕೈಯಲ್ಲಿ|
ಧರಿಸಿ ಶತ್ರುಗಳನ್ನು ಹನನ ಮಾಡೆ |
ಪರಿಪ್ರಾಪ್ತವಾದ ಘನತಿಯು ಪುರುಷಗಲ್ಲದೆ ಜಡ |
ಕರಗಸಕೆ ಕೀರ್ತಿ ಬರುವದೆಂತೊ |
ತುರಗ ಬಿಗಿದ ರಥ ಗಮನಾಗಮನದಿಂದ |
ಪರಿಖ್ಯಾತಿವೈದಿದ ಕೀರ್ತಿಯನ್ನು |
ತುರಗಶ್ರೇಷ್ಟಕೆ ಹೊರತು ಜಡಕೆ ಬರುವದುಂಟೆ ಈ |
ತೆರದಿ ಬರುವದಯ್ಯಾ ಎನಗೆ ಕೀರ್ತಿ |
ಹರಿ ನೀ ಒಲಿದು ಎನ್ನ ನಾಮ ರೂಪವಧರಿಸಿ |
ಧರಣಿ ಭಾರವ ನಿಳುಹಿ ಮರೆದ ದೇವಾ |
" ಯಯೇನಂ ವೇತ್ತಿ ಹಂತಾರಂ ಯಶ್ಚೈನಂಮನ್ಯತೆಹತಂ
ಉಭೌತೌನವಿ ಜಾನೀತೌ ನಾಯಂ ಹಂತಿ ನಹನ ತೇ " ||
ಕರುಣಾನಿಧಿಯೇ ಗುರು ವಿಜಯ ವಿಠ್ಠಲರೇಯಾ |
ಹರಣ ಮಾಡುವ ಕರ್ತು ನೀನೆ ದೇವಾ | || ೩ ||

## ಅಟ್ಟತಾಳ

" ನಜಾಯತೇ ಮ್ರಿಯತೇವಾ ಕದಾಚಿನ್ |
ನಾಯಂ ಭೂತ್ವಾ ಭವಿತಾವಾ ನಭೂಯಃ |
ಅಜೋನಿತ್ಯಃ ಶಾಶ್ವತೋಽಯಂ ಪುರಾಣೋ |
ನಹನ್ಯತೆ ಹನ್ಯಮಾನೇ ಶರೀರೇ" |
ಕರುಣಾನಿಧೆ ಗುರು ವಿಜಯ ವಿಠ್ಠಲರೇಯ |
ಸೋಜಿಗವೇ ಸರಿ ಎನ್ನ ಅಪರಾಧವಾ | || ೪ ||

## ಆದಿತಾಳ

" ಲೇಲೀಹ್ಯಸೇ ಗ್ರಸಮಾನಃ ಸಮಂತಾತ್ |
ಲೋಕಾನ್ ಸಮಗ್ರಾನ್ ವದನೈರ್ಜ್ವಲದ್ಭಿಃ |
ತೇಜೋಭಿರಾ ಪೂರ್ಯ ಜಗತ್ ಸಮಗ್ರಂ |
ಭಾಸಸ್ತವೋಗ್ರಾಃ ಪ್ರತಪಂತಿ ವಿಷ್ಣೋ ' || ಅ 11 ಶ್ಲೋ 30
ಬಾಲಾರ್ಕ ಕೋಟಿಪ್ರಭ ಗುರು ವಿಜಯ ವಿಠ್ಠಲರೇಯಾ |
ಆಲೋಚಿಸಿದರೂ ಎನಗಿಲ್ಲಪರಾಧವಾ | || ೫ ||

## ಜತೆ

ಬ್ರಹ್ಮಸ್ತ್ವ ಬ್ರಹ್ಮಾನಾಮಾಸೌ ರುದ್ರಸ್ತು ರುದ್ರನಾಮಾ
ಎಮ್ಮನಾಮವು ನೀನೇ ಗುರುವಿಜಯ ವಿಠ್ಠಲರೆಯಾ

|| ೬ ||

ಶ್ರೀಮಧ್ವೇಶಾರ್ಪಿತವು
ಶ್ರೀಭಾರತೀಕಾಂತಸ್ಥಿತ ಶ್ರೀಕೃಷ್ಣಾರ್ಪಿತ

## ಶ್ರೀ ಶ್ರೀ ರಘುದಾಂತ ತೀರ್ಥ ವಿರಚಿತ ಶ್ರೀ ಶೇಷದಾಸರ ಅಷ್ಟಕ

ಸೀತಾಪತಿಂ ಹರಿಮ ಜಾತಂ ಪ್ರಣಮ್ಯಮತಿ ಹೇತುಂ ಸುಖಾಯ ಪವನಾ |
ಜ್ಞಾತಂ ಬಲಾಯ ಪುರುಹೂತಾವತಾರ ಜಯತೀರ್ಥಂ ಧನಾರ್ಥ ಮನಿಶಂ ||
ಪೋತಂ ಸುಧೀಂದ್ರ ಗುರು ಜಾತಂ ತಥೈವ ಮಮ ತಾತಂಚ ಜೀವಿತ ಕೃತೇ |
ಖ್ಯಾತಸ್ಸರೀತಿ ಮನು ನೀತಾಂ ಕರೋಮಿ ಕೃತಿ ಮೇತಾಂತು ಶೇಷ ಸುಗುರೋಃ ||೧||

ಶ್ರೀ ಪಾರ್ಥಸೂತ ಪದ ಜಾಪಾಖ್ಯ ಮುಕ್ತಿಪದ ಸೋಪಾನ ಮಾರ್ಗದ ಗುರುಃ |
ಪಾಪಾತ್ಮನಾಂ ನಿಖಿಲ ತಾಪಾಪನೋದನತ ಯಾಪಾರ ಸೌಖ್ಯ ಮಧುಹತ||
ಭೂಪಾಲವರ್ಯ ಕೃತ ಕೋಪಾತ್ಕದಾಚಿದಯ ಘ್ರಾಪ್ಯಾಶ್ಚುಚಿಪ್ಪ ಶಿಖರಂ |
ಗೋಪಾಲ ಭಕ್ತ ವಿಜಯೋಪಾಭಿದಸ್ಯ ಮಹಿಮಾಪೂರ ಮಜ್ಜನ ಮಥಾತ್ || ೨ ||

ದಾಸಾರ್ಯ ವರ್ಯ ಕರುಣಾಸಾಗರೋಪಗತ ಮೇಶಾಂಘ್ರಿ ಪದ್ಮ ಮಹಿಮಾ |
ಲೇಶಾಮೃತಾಪ್ತಮತಿ ಕೋಶಃಶಚೀಶ ಇವ ಭಾಸಾಭಿನಂದ್ಯ ವಿಭುಧಾನ್ ||
ದೇಶಾನ ಟನ್ ಖಿಲ ಕುಲೇಶಾನ್ ವಿಜಿತ್ಯ ರಭಸಾಸಾದ್ಯ ಭಕ್ತಿ ಭರಿತೋ |
ವ್ಯಾಸಾರ್ಯ ಪನ್ನವ ಪಲಾಶೇನ ನಾಮ ಪತಗೇಶೋ ಯಥಾ ಮುರಹರಂ || ೩ ||

ಕ್ರೂರಾರಿ ದುಷ್ಟಮತ ವಾರಾಸಿ ಕುಂಭಸುತ ಮಾರಾದ್ಯ ತದ್ವರಯುತಃ |
ಸಾರಂ ಸುಚಿಂತ್ರವಲಿ ಮಾರಾದುಪೇತ್ಯ ಕಪಿ ವೀರಂಭಜನ್ ಕತಿಪಯಾನ್ ||
ವಾರಾನುವಾಸ ಗುರುರಾರಾಧಯನ್ ಸುಜನ ವಾರಂ ಸುಭೋಜ್ಯ ಧನತೋ
ದೂರತ್ಪಿಶಾಚ್ಯ ಪರಿವಾರಃ ಪ್ರಯಾತಿ ಖಲು ಘೋರೋಪಿ ಯತ್ಸ್ಮರಣತಃ || ೪ ||

ಜಂಭಾರಿ ದಂತಿವರ ದಂಭಾಪಹಾರಿ ಕುಚಿ ಕುಂಭಾಂಚಿತೇಂದ್ವ ವರಜಾ |
ಸಂಭೋಗ ಕಾಲಪರಿ ರಂಭಾಪ್ತ ಕುಂಕುಮ ವರಾಂಭೋರುಹಾಂಕ ರುಚಿರಂ ||
ಅಂಭೋಜನಾಭ ಘುತಿ ಸಂಭಾವನಾಯ ಜಗದಂಬಾ ಕುಮಾರ ವಚನಾತ್ |
ಕುಂಭೀಂದ್ರ ಕೃತ್ತಿಧರ ಶಂಭೋರ್ಗಿರಿಂ ಜನಕ ದಂಬಾವೃತೋ ಗುರುರಗಾತ್ || ೫ ||

ರಾಮಂ ರಘೋಃಕುಲಲಲಾಮಂ ನಿಶಾಟತತಿ ಭೀಮಂ ಬಲಾಹಕ ಇವ |
ಶ್ಯಾಮಂ ಸತಾಂ ಸಕಲ ಕಾಮ ಪ್ರದಂತ ಮಿಹ ಸೋಮಂ ಸುರೋಡು ನಿಕರೇ ||
ಸೌತ್ಮ್ಯಂಬುಜಾಕ್ಷಮಿತಿ ವಾಮಂ ಯಥಾ ಸುಜನ ಧಾಮಾಸ್ತುವನ್ ಭಗವತಃ |
ಪ್ರೇಮಂ ಪ್ರಸಾದ್ಯ ಬಲ ಸೀಮಂ ಸಮೀರಣ ಮಧೋಮಾಕಳತ್ರ ಮಭಜತ || ೬ ||

ಗಂಗಾಂಕದಾಚಿದಘ ಸಂಘಾಪಹಾರಕ ವಿಹಂಗಾಧಿಪ ಧ್ವಜವರೋ |
ತ್ಸಂಗಾವಧಿಪ್ಲುತ ತರಂಗಾನ್ ದದರ್ಶ ಭವ ಭಂಗಾಂ ಜನೈಃ ಪರಿವೃತಃ ||
ತುಂಗೋಪವಾಸ ವೃತ ರಂಗಾಧಿಪಸುಜನ ಸಂಗೀಹರೇರ್ಗುಣ ಗಣಾನ್ |
ಸಂಗೀತತೋಕಥಯ ಧ್ದಂಗೀ ಚಕಾರ ಮೃದುಲಾಂಗೀ ರಮಾಸುತ ಇತಿ || ೭ ||

ಶ್ರೀ ರಾಘವೇಂದ್ರ ಗುರು ಮಾರಾದ್ಯ ಮಾಯಿದಿತಿ ಧಾರಿಂತದೀಯ ಕರುಣಾ |
ಧಾರೋನುಭೂಯ ಸುಖಸಾರಂ ಕಿರೀಟ ರಥ ಭಾರಂ ವಹಂತ ಮದಧತ ||
ಶ್ರೀ ರಾಮವತ್ ಖಲ ಕುಠಾರೋಪ ನೀತಿ ಕೃತಿ ಮಾರಾದ್ವಿಧಾಯ ಸುಯಶೋ |
ದೂರಂಗತಂ ಭುವಿ ದಧಾರಾಥನಾಕಿ ಪರಿವಾರಸ್ತುತೋ ಯಮಭವತ್ || ೮ ||

ಶ್ರೀ ಶೇಷವರ್ಯ ಹರಿದಾಸಾಗ್ರಣೇಶ್ಚರಿತ ಮಾಶಂಸಿತಂ ಯಲಮಳಾ |
ವಾಸಸ್ಯ ವಿಠ್ಠಲ ಕೃತೀಶಸ್ಯ ಪೂರ್ಣ ಕರುಣಾಶಾವತಾಹ್ಯಹರಃ ||
ಶ್ರೀ ಶ್ರೀನಿವಾಸ ಸುಕವಿಶೇನ ಪಾಠಮನು ಮೇಶೋದದಾತಿ ಸುಸುತಂ |
ವಾಸೋಧನಂಚ ಸುಯಶಃ ಶೋಭನಂ ಸುಖಮ ಶೇಷಃ ಶ್ರುತಿ ಸ್ಮೃತಿ ಗತಿಂ || ೯ ||

ಇತಿ ಶ್ರೀ ಶ್ರೀ ರಘುದಾಂತ ತೀರ್ಥ ವಿರಚಿತ ಶ್ರೀ ಶೇಷದಾಸರ ಅಷ್ಟಕ ಸಂಪೂರ್ಣಂ

|| ಶ್ರೀ ಕೃಷ್ಣಾರ್ಪಣಮಸ್ತು ||

ಶ್ರೀ ಗುರು ವಿಜಯ ವಿಠ್ಠಲ ಪ್ರಸೀದತು

0 || ಇಂದ್ರಾವತಾರರಾದ ಮೊದಲಕಲ್ಲು ಶೇಷದಾಸರ ಆಗತಿ ಬರೆಯಲು ಪ್ರಾರಂಭ || 0 ||

0 || ಶ್ರೀ ಶೇಷದಾಸ ಗುರುಭ್ಯೋ ನಮಃ || 0

0 || ಹ || ಸಾರ - ಪದ್ಯ || ನರಹರಿ ಆವೇಶ ಸಂಯುತ ನರ ಪುರಂದರ ಗಾಧಿ ಕುಶ - ಮಂದ್ರದ್ಯುಮ್ನ - ವಿಕುಕ್ಷಿ ವಾಲಿ - ಇಂದ್ರನವತಾರ || ೧ ||

0 || ಪದ್ಯ || ತ್ರಿದಿವ ತರುಮಣಿಧೇನುಗಳಿಗಾಸ್ಪದವೆನಿಪ ತ್ರಿದಶಾಲಯಾಬ್ಧಿಗೇ ಬದರನಂದ ಲೊಪ್ಪು ತಿಪ್ಪ ಉಪೇಂದ್ರ ಚಂದ್ರಮನ |

0 || ಮೃದು ಮಧುರ ಸುಸ್ಥವನದಿಂದಲಿ | ಮಧು ಸಮಯ ಪಿಕನಂತೆ ಪಾಡುವ - ಮುದಿರ ವಾಹನ ನಂಘ್ರಿಯುಗ್ಮಂಗಳಿಗೆ ನಮಿಸುವೆನು || ೨ ||

# ವಾಸುದೇವ ಸಂಕರ್ಷಣ ಪ್ರದ್ಯುಮ್ನ ಅನಿರುದ್ಧ

| ನಂ | ಬ್ರಂಹ್ಮಮಾನವರ್ಷ | ಸೃಷ್ಟಿ ವಿವರ | ವರ್ಷ | ಯಾರಿಂದ ಶೃಷ್ಟಿ | ಶೃಷ್ಟಿಗೆ ಬಂದವರು | |
|---|---|---|---|---|---|---|
| ೧ | ಉದಯಕ್ಕೆ | ಶ್ರೀ ಬ್ರಹ್ಮಕಲ್ಪದ ಮೊದಲನೆ ದಿವಸ ಬೆಳಿಗ್ಗೆ | ಹಗಲು | ಶ್ರೀ ವಾಸುದೇವ ಮಾಯಾದೇವಿಯಲ್ಲಿ | ಪುರುಷ ಬ್ರಹ್ಮನ ಜನನ | |
| ೨ | ೮ನೇ ವರುಷ | ಎಂಟನೇ ವರುಷದಲ್ಲಿ | ೮ | ಶ್ರೀ ಪ್ರದ್ಯುಮ್ನ ಕೃತಿ ದೇವಿಯಲ್ಲಿ | ವಿರಿಂಚಿ ನಾಮಕ ಬ್ರಹ್ಮನ ಜನನ | |
| ೩ | ೯ನೇ ವರುಷ | ಎಂಟು ವರುಷದ ನಂತರ ೯ನೇ ವರುಷಕ್ಕೇ | ೧ | ಸತ್ವದ ಗಾಯಿತ್ರಿಯಲ್ಲಿ | ಪುನಃ ವಿರಿಂಚಿ ಬ್ರಹ್ಮ ಜನನ | |
| ೪ | ೧೦ನೇ ವರುಷ | ಹತ್ತನೇ ವರುಷವರೆಗೇ - ಸೂಕ್ಷ್ಮ ಶೃಷ್ಟಿ ಮಾಡಿದನು - ಹತ್ತು ವರ್ಷಗಳಾದವು - ೧೦ | ೧ | ವಿರಿಂಚಿ ಬ್ರಹ್ಮ ಸರಸ್ವತಿಯರಲ್ಲಿ ವೈಕಾರಿಕರುದ್ರ ಪಾರ್ವತಿಯರಲ್ಲಿ | ವೈಕಾರಿಕ ರುದ್ರ ಪಾರ್ವತಿ ಜನನ 1 ಇಂದ್ರನ ಜನನ | ಇಂದ್ರ 1 |
| ೫ | ೧೧ - ೨೦ | ೧೧ನೇ ವರ್ಷದಿಂದ ೨೦ ವರ್ಷಗಳವರೆಗೇ ಪ್ರದ್ಯುಮ್ನ ದೇವರು - ಅರ್ಧನಾರಿ ರೂಪದಿಂದ ಜಾತಿ ವಿಭಾಗ ಮಾಡಿದ್ದು - ೨೦ | ೧೦ | ಪ್ರದ್ಯುಮ್ನ ದೇವರಿಂದ | 2 ಇಂದ್ರನ ಜನನ | ಇಂದ್ರ 2 |
| ೬ | ೨೧ ವರುಷ | ೨೧ನೆ ವರುಷ ಅನಿರುದ್ಧ ದೇವರು ಲಿಂಗಗುಣ ವೈಷಮ್ಯದಿಂದ ಲಿಂಗೋಪಾದಾನ ಅವ್ಯಕ್ತ - ಅನಿರುದ್ಧಶರೀರ ನಿರ್ಮಾಣ - ೨೧ | ೧ | ಅನಿರುದ್ಧ ದೇವರಿಂದ | 3 ಇಂದ್ರನ ಜನನ ರಜ - ಸತ್ವ - ಸತ್ವ | ಇಂದ್ರ 3 |
| ೭ | ೨೨ - ೩೫ | ೨೨ನೆ ವರುಷದಿಂದ ೩೫ ವರ್ಷದವರೆಗೇ ೧೪ ವರ್ಷ ರುದ್ರದೇವರು ಅರ್ಧನಾರೀ ರೂಪದಿಂದ - ದೇವತೆಗಳು ಮತ್ತು ತತ್ವಗಳ ಶೃಷ್ಟಿ ಮಾಡಿದನು - ೩೫ | ೧೪ | ರುದ್ರದೇವರ ಸೃಷ್ಟಿ | 4 ಇಂದ್ರನ ಜನನ ಅನಿರುದ್ಧ ದೇಹದಿ | ಇಂದ್ರ 4 |

| | | | | | | |
|---|---|---|---|---|---|---|
| ೨೧ | ಪುನಃ ಕಲಿಯುಗದಲ್ಲಿ | ಇಂದ್ರಾಂಶಜರಾದ ಮೊದಲಕಲ್ಲು ಶೇಷದಾಸರ ಅವತಾರ ಕ್ರಮ - ನೈಜಾಂ ಇಲಾಖಾ ಹೈದ್ರಾಬಾದ್ ಸಂಸ್ಥಾನಕ್ಕೆ ಸೇರಿದ ಮಹಬೂಬನಗರ ಜಿಲ್ಲಾ ಸಂಸ್ಥಾನ ಗದ್ವಾಲಿಗೆ ಸೇರಿದ ಧರೂರು ಗ್ರಾಮನಿವಾಸಿಗಳಾದ ಕುಲಕರ್ಣಿ ತಿಮ್ಮಣ್ಣಯ್ಯನವರ ಮಕ್ಕಳು ಶ್ರೀ ಶೇಷಪ್ಪನವರು. ಜನನ ಶಾ ‖ ಶಕೆ 1739 ಇ. 1817 ಫ 1227. ಶ್ರೀ ಈಶ್ವರನಾಮ ಸಂವತ್ಸರದಲ್ಲಿ ಜನನ. 16 ವರ್ಷದ ವರೆಗೆ ವಿದ್ಯಾಭ್ಯಾಸ ಅಲ್ಲಿಂದ ೨೦ ವರ್ಷಗಳು ಧರೂರು ಕುಲಕರ್ಣಿ ಕೆಲಸ ಮಾಡಿದರು. ಇವರ 36 ನೇ ವರ್ಷ ವಯಸ್ಸಿನಲ್ಲಿ ಗದ್ವಾಲಿ ಸಂಸ್ಥಾನ ರಾಜನಾದವನು ಚಿನ್ನ ಸೋಮಭೂಪಾಲಯಂಬುವನು - ಇವರ - ಶ್ರೀಹರಿಗುರುಸೇವಾ ಅನ್ನಸಂತರ್ಪಣೆ ನೋಡಿ ಸಹನವಿಲ್ಲದೆ ಪರರ ಮಾತನ್ನು ಕೇಳಿ ಗದ್ವಾಲಿ ರಾಜನು ಅನಿಮಿತ್ಯವಾದ ಅಪರಾಧಕ್ಕೆ ಮುನಿದು ಸಂದರ್ಭ ನೋಡಿಕೊಂಡು ಇವರನ್ನು ಕರೆಸಿ ಸಭಾದಲ್ಲಿ ಅಪಮಾನ ಮಾಡಿದನು - ಅಪಮಾನ ಶಕೆ 1775 ಇ 1853 - ಫ 1263 ಸಂ ‖ ರ ಪ್ರಮಾದೀಚನಾಮ ಸಂ ‖ ದಲ್ಲಿ - ಇವರು ಅಂದೇ ಯಲ್ಲಾ ವೃತ್ತಿ ಸ್ವ್ಯಸ್ಥಿಗಳನು ತ್ಯಜಿಸಿ ಉಪವಾಸ ಮಧ್ಯಾಹ್ನವೇ ನೇರವಾಗಿ ಚಿಂತ್ರ ವೇಲಿಗೆ ಹೋಗಿ ಶ್ರೀ ಪ್ರಾಣದೇವರ ಸೇವಾ ಉಪವಾಸದಿಂದ ಮಾಡಿದರು. ಪ್ರಾಣದೇವರ ಅಜ್ಞಾಪ್ರಕಾರ - ಚಿಪ್ಪಗಿರಿಯಲ್ಲಿ ವಿಜಯದಾಸರಲ್ಲಿ ಸೇವಾ ಪ್ರಾರಂಭಮಾಡಿದರು - ಇಲ್ಲಿಗೆ ದಾಸರ ವಯಸ್ಸು 36 ವರ್ಷಗಳಾದವು. - | | ಶ್ರೀ ಶೇಷದಾಸರು ಚಿಪ್ಪಗಿರಿಯಲ್ಲಿ ಶ್ರೀ ವಿಜಯದಾಸರಲ್ಲಿ 6 ತಿಂಗಳು ಕಠಿಣ ಸೇವಾ ಮಾಡಲು ವಿಜಯದಾಸರು ಅನುಗ್ರಹಿಸಿ ಸ್ವಪ್ನದಲ್ಲಿ "ಗುರು ವಿಜಯ ವಿಠ್ಠಲ"ನ ಸೇವಕ ನೀನೆಂದು ಅಂಕಿತ ಪ್ರಧಾನ ಮಾಡಿದರು - ಆಗ ದಾಸದೀಕ್ಷಾವಹಿಸಿ ಅಪರೋಕ್ಷಿಗಳಾಗಿ "ಚಿಂತ್ರವೇಲಿಗೆ" ದಿಂದು ಪ್ರಾಣದೇವರ ಆಜ್ಞಾಪ್ರಕಾರ ಮೊದಲಕಲ್ಲಿಗೆ ಬಂದು ವೆಂಕಟರಮಣನ ಸೇವೇ ಮಾಡುತ್ತಾ ಶಕೆ 1776 ಇ 1854 ಫ 1264 ಆನಂದ ನಾಮ ಸಂವತ್ಸರ - ಉಗಾಭೋಗವನ್ನು ರಚಿಸಿದ್ದಾರೆ - ಮುಂದೆ ರಾಕ್ಷಸ ಸಂ ‖ ದಿಂದ ದ್ವಾಪರದ ತಮ್ಮ ಪೂರ್ವಜನ್ಮದಲ್ಲಿ ಕೃಷ್ಣನ ಸೇವೇ ಮಾಡಿದ್ದು ಸ್ಮರಿಸಿ ಕುರುಕ್ಷೇತ್ರ ರಣರಂಗದಲ್ಲಿ ವಿಷಯಗಳು ಸೇರಿಸಿ ಅನೇಕ ಪದ ಪದ್ಯ ಸುಳಾದಿಗಳು ರಚಿಸಿದ್ದಾರೆ. ಇದರಿಂದ ಅರ್ಜುನಾಂಶರೇ ನಿಶ್ಚಯವಾಯಿತು. - | ಶ್ರೀದಾಸರಾಯರು ಆನಂದ ನಾಮಸಂ‖ ದಲ್ಲಿ ವಿಜಯ ದಾಸರಿಂದ ದಾಸ ದೀಕ್ಷಾವಹಿಸಿ 32 ವರ್ಷ ಶ್ರೀ ಪಾರ್ಥಿವ ಸಂ ‖ ದವರೆಗೆ ಅಂದರೆ ಶಕೆ 1776 ಇ 1854 ಫ 1264 ರಿಂದ ಶಕೆ 1807 ಇ 1885 ಫ 1295 ವರೆಗೆ ಮೊದಲಕಲ್ಲು ಶ್ರೀ ವೆಂಕಟರಮಣನಲ್ಲಿ ಸೇವಾನಿರತರಾಗಿ ತಮ್ಮ ದ್ವಾಪರಯುಗದ ಅನುಭವ ಶ್ರೀ ಕೃಷ್ಣ ಚರಣಸೇವೆ ಸಖ್ಯತನ ನೆನಿಸಿ - ದ್ವಾಪರದ ರಾಜ್ಯವೈಭವ ಸ್ಮರಣೆ ಕುರುಕ್ಷೆತ್ರ ರಣರಂಗದ ಸ್ಮರಣೆ ಮುಂತಾದ ವಿಷಯಗಳು ಅನುಭವಿಸಿದ್ದು ತಮ್ಮ ಪದ ಪದ್ಯ ಸುಳಾದಿಗಳಲ್ಲಿ ಅರ್ಜುನಾಂಶರೆಂದು 43 ಸುಳಾದಿಗಳಲ್ಲಿ ಹೇಳಿದ್ದಾರೆ. ಅನೇಕ ಭಕ್ತಜನರುಗಳ ಆಪತ್ತು ಪರಿಹಾರ ಮಾಡಿರುವರು. ಚಿಂತ್ರವೇಲಿ ಪ್ರಾಣದೇವರು - ಧರೂರು ಪಾರ್ಥಸಾರಥಿ - ಮೊದಲಕಲ್ಲು ವೆಂಕಟರಮಣನ ಸೇವೆ ಮಾಡಿ ಧರೂರಲ್ಲಿ ಪಾರ್ಥಸಾರಥಿ ಪ್ರತಿಷ್ಠೆ ಚೈತ್ರ ಶು ‖ ಪ್ರತಿಪದಾಮಾಡಿಸಿ ಶ 1807 ಇ 1885 - ಫ 1295 - ಅಲ್ಲಿಂದ ಮೊದಲ ಕಲ್ಲಿಗೆ ಬಂದು ಪಾರ್ಥಿವ ನಾಮ ಸಂ ‖ | |

ವೈಶಾಖ ಶು ‖ ೮ ಅಷ್ಟಮಿ ಅಶುಭದಿನದಲ್ಲಿ ಅಂದರೇ ಶ ‖ 1807 ಇ 1885 ಫ 1295 ದಿನ ಲಯ ಚಿಂತನ ಮಾಡುತ್ತಾ ವರವಿಮಾನವನೇರಿ - ಇಹಲೋಕ ತ್ಯಜಿಸಿ ಪರಲೋಕಗತರಾದರು.

**ಗುರು ಮಧ್ವರಾವ ಉಪ್ಪಲಿ**

ಗುರು ವಿಜಯ ದಾಸಾಶ್ರಮ

ರಾಯಚೂರು.

‖ ಶ್ರೀ ಕೃಷ್ಣಾರ್ಪಣಮಸ್ತು ‖

|| ಶ್ರೀ ಲಕ್ಷ್ಮೀಶ್ರೀನಿವಾಸ ಪ್ರಸನ್ನ ||



ಧನ್ಯ ಮಾನ್ಯರಾದ ಗುಪ್ತ ಸಾಧಕರಾದ ಅಸ್ಮದ್ ಗುರುವರ್ಯರು ಶ್ರೀ ಗುರುಮಧ್ವರಾವ್ ಉಪ್ಲಿಯವರು. ನನಗೆ ಇವರ ಪರಿಚಯ ಸುಮಾರು ನಲವತ್ತು ವರ್ಷದ್ದು.

ಶ್ರೀಹರಿ ವಾಯು ಗುರುಗಳು ಮತ್ತು ಭಕ್ತಜನ ಪ್ರೀತಿಯ ಸಾಗರವೇ ಆದ ಶ್ರೀಗುರು ಮಧ್ವರಾವ್ ಉಪ್ಲಿಯವರು ಶ್ರೀ ವಾಯುದೇವರು ಜಪಿಸುವ ಶ್ರೀಹಂಸ ಮಂತ್ರದಂತೆ, ಸದಾ ವಿರಾಮವೇ ಇಲ್ಲದಂತೆ ಇವರು ಶ್ರೀ ದಾಸವರ್ಯರ ಪದ ಪದ್ಯ, ಸುಳಾದಿಗಳನ್ನೇ ತಮ್ಮ ಜೀವನದ ಉಸಿರಾಗಿಸಿಕೊಂಡಿದ್ದಾರೆ. ಶ್ರೀ ಶೇಷದಾಸರ ಅಷ್ಟಕದ ಮಹಿಮೆಯನ್ನು ಎಲ್ಲಾ ಭಕ್ತರಿಂದಲೂ ಪಾರಾಯಣ ಮಾಡಿಸಿ. ಶ್ರೀ ಪಾರ್ಥಸಾರಥಿಗೆ. ಸಮರ್ಪಿಸಿ ಎಲ್ಲರಿಗೂ ಶ್ರೀಹರಿಗುರುಗಳ. ಅನುಗ್ರಹವಾಗುವಂತೆ ಆರ್ಶೀವದಿಸಿದ್ದಾರೆ.

ಪಿ. ರಾಮಚಂದ್ರರಾವು
ರಾಯಚೂರು